Table of Contents

ಕರ್ನಾಟಕ ಸರ್ಕಾರ

# ಸಮಾಜಶಾಸ್ತ್ರ

ಭಾರತೀಯ ಸಮಾಜಶಾಸ್ತ್ರ

ಒಂಬತ್ತನೇ ತರಗತಿ

ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ

2016

ಕರ್ನಾಟಕ ಪಠ್ಯಪುಸ್ತಕ ಸಂಘ (ರಿ)

100 ಅಡಿ ವರ್ತುಲ ರಸ್ತೆ, ಬನಶಂಕರಿ 3 ನೇ ಹಂತ,

ಬೆಂಗಳೂರು- 560 085.

**ಮಿತ್ರ ಜ್ಯೋತಿ ಡಿಜಿಟಲ್ ಲೈಬ್ರರಿ**

**ಮಿತ್ರ ಜ್ಯೋತಿ**

ಸಿ. ಎ. ಸೈಟ್ ನಂ. ಪಿ- 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ,

ಸೆಕ್ಟರ್-1, ನಿಫ್ಟ್‌ನ ಹಿಂಭಾಗ, ಹೆಚ್. ಎಸ್. ಆರ್. ಲೇಔಟ್,

ಬೆಂಗಳೂರು- 560102

+91 ಕಂಟ್ರಿ ಕೋಡ್: 80 ಸಿಟಿ ಕೋಡ್

ದೂರವಾಣಿ ಸಂಖ್ಯೆ: 22587623/ 22587625

ಈ-ಮೇಲ್: mj.tblibrary@gmail.com

ವೆಬ್ ಸೈಟ್: www.mitrajyothi.org

**ಪ್ರತಿಕರಣ ಹಕ್ಕು ತಿದ್ದುಪಡಿ ಪ್ರಕಟಣೆ:**

ಸುಲಭವಾಗಿ ಲಭ್ಯವಾಗುವ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು, ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲಾಗದ ದೃಷ್ಟಿವಿಶೇಷಚೇತನರಿಗಾಗಿ ಹಾಗೂ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಿತ್ರಜ್ಯೋತಿ ಸಂಸ್ಥೆಯಿಂದ ವಿಶೇಷವಾಗಿ ತಯಾರಿಸಲಾಗಿದೆ. ಮಿತ್ರಜ್ಯೋತಿಯ ವಿಳಾಸ: ಸಿ.ಎ. ಸೈಟ್ ನಂ. ಪಿ 22, 18 ನೇ ಅಡ್ಡರಸ್ತೆ, 31 ನೇ ಮುಖ್ಯರಸ್ತೆ, ಸೆಕ್ಟರ್ 1, ನಿಫ್ಟ್‌ನ ಹಿಂಭಾಗ, ಹೆಚ್.ಎಸ್.ಆರ್. ಲೇಔಟ್, ಬೆಂಗಳೂರು – 560 102. ದೂರವಾಣಿ ಸಂಖ್ಯೆ – 22587623/ 22587625 (ಭಾರತದ ಕೋಡ್: +91, ಬೆಂಗಳೂರಿನ ಕೋಡ್: 080). ಈ-ಮೇಲ್ ವಿಳಾಸ: mj.tblibrary@gmail.com; ವೆಬ್ಸೈಟ್: www.mitrajyothi.org

ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಜುಲೈ 24, 2014 ರಲ್ಲಿ ಭಾರತದಲ್ಲಿ ಊರ್ಜಿತಗೊಂಡ ಮಾರಾಕೇಶ್ ಕರಾರಿನಂತೆ ಹಾಗೂ 1957 ರ ಪ್ರತಿಕರಣ ಹಕ್ಕು ಕಾಯ್ದೆ ಪ್ರಕರಣ 52 (1) (zb) ಪ್ರಕಾರ ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗಾಗಿ ಮಾತ್ರ ವಿತರಿಸಲು ತಯಾರಿಸಲಾಗಿದೆ. ಮೂಲ ಪ್ರಕಟಣೆಯಿಂದ ಸುಲಭವಾಗಿ ಲಭ್ಯವಾಗುವ ಶೈಲಿಗೆ ಪರಿವರ್ತಿಸಲ್ಪಟ್ಟ ಈ ಪುಸ್ತಕ/ ಡೈಸಿ ಧ್ವನಿಮುದ್ರಣವನ್ನು ಬಳಸಲು ಮುದ್ರಣ ಪ್ರತಿಯನ್ನು ಓದಲು ಅಸಮರ್ಥರಾದವರಿಗೆ ಮಾತ್ರ ಅನುಮತಿಯಿದೆ. ಇದರ ಹೆಚ್ಚಿನ ಪ್ರತಿಗಳ ತಯಾರಿಕೆ ಅಥವಾ ಸಾಮಾನ್ಯ ಮುದ್ರಣ ಪ್ರತಿಯನ್ನು ಓದಲು ಸಮರ್ಥರಾದ ಯಾರಿಗೇ ಆಗಲಿ ಇದನ್ನು ವಿತರಿಸುವುದು ಅಥವಾ ಬೇರೆ ಯಾವುದೇ ರೀತಿಯ ವಾಣಿಜ್ಯ- ವ್ಯಾಪಾರಕ್ಕೆ ಈ ಪುಸ್ತಕ/ ಡೈಸಿ ಧ್ವನಿಮುದ್ರಣದ ಬಳಸುವಿಕೆಯನ್ನು ಕಟ್ಟುನಿಟ್ಟಾಗಿ ನಿಷೇಧಿಸಲಾಗಿದೆ. ಹಾಗೆ ಬಳಸುವವರ ವಿರುದ್ಧ ಕಾನೂನಾತ್ಮಕವಾಗಿ ಕಠಿಣ ಕ್ರಮಗಳನ್ನು ಕೈಗೊಳ್ಳಲಾಗುವುದು.

## ಮುನ್ನುಡಿ

ಪ್ರೌಢಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವ ವಿಶೇಷ ಚೇತನ ವಿದ್ಯಾರ್ಥಿಗಳಿಗಾಗಿ ಈ ಪಠ್ಯಪುಸ್ತಕವನ್ನುಸಿದ್ಧಪಡಿಸಲಾಗಿದೆ. ವಿಜ್ಞಾನ ಮತ್ತು ಗಣಿತ ವಿಷಯಗಳಿಗೆ ಪರ್ಯಾಯವಾಗಿ ವಿದ್ಯಾರ್ಥಿಗಳು ಇಚ್ಚಿಸಿದಲ್ಲಿ ರಾಜ್ಯಶಾಸ್ತ್ರ, ಸಮಾಜಶಾಸ್ತ್ರ ಮತ್ತು ಅರ್ಥಶಾಸ್ತ್ರ- ಈ ಮೂರು ವಿಷಯಗಳಲ್ಲಿ ಯಾವುದಾದರೂ ಎರಡು ವಿಷಯಗಳನ್ನು ಆಯ್ಕೆಮಾಡಿಕೊಳ್ಳುವ ಅವಕಾಶವನ್ನು ನೀಡಲಾಗಿದೆ. ಇವುಗಳಲ್ಲಿ ಸಮಾಜಶಾಸ್ತ್ರ ಪಠ್ಯವಿಷಯವು ಒಂದಾಗಿದೆ. 2015 ನೇ ಸಾಲಿನಲ್ಲಿ ಸಿದ್ಧಪಡಿಸಿದ ಹತ್ತನೇ ತರಗತಿ ಪಠ್ಯಪುಸ್ತಕವು ‘ಸಾಮಾಜಿಕ ಬದಲಾವಣೆ ಮತ್ತು ಅಭಿವೃದ್ಧಿ’ ಎಂಬ ಶೀರ್ಷಿಕೆಯಡಿಯಲ್ಲಿ ಸಾಮಾಜಿಕ ಬದಲಾವಣೆಯ ವಿವಿಧ ಮಜಲುಗಳನ್ನು ವಿದ್ಯಾರ್ಥಿಗಳು ಅರ್ಥೈಸಿಕೊಳ್ಳಲು ನೆರವಾಗಿದೆ ಹಾಗೂ ಎಂಟನೇ ತರಗತಿಯಲ್ಲಿ ‘ಸಮಾಜಶಾಸ್ತ್ರ’ವನ್ನು ಪರಿಚಯಿಸಲಾಗಿದೆ. ಈಗ 2016 ನೇ ಸಾಲಿನ ಒಂಬತ್ತನೇ ತರಗತಿಯ ಸಮಾಜಶಾಸ್ತ್ರ ಪಠ್ಯಪುಸ್ತಕವು ‘ಭಾರತೀಯ ಸಮಾಜ’ ಎಂಬ ಶೀರ್ಷಿಕೆಯಡಿಯಲ್ಲಿ ಪ್ರಕಟವಾಗುತ್ತಿದೆ. ಇದು 2005 ರ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟಿನಡಿಯಲ್ಲಿ ಹಾಗೂ ಪಠ್ಯವಸ್ತುವಿಗೆ ಅನುಗುಣವಾಗಿ ರಚನೆಯಾಗಿದೆ. ಈ ಪಠ್ಯದಲ್ಲಿರುವ ಅಧ್ಯಾಯಗಳು ವಿದ್ಯಾರ್ಥಿಗಳಲ್ಲಿ ಭಾರತೀಯ ಸಮಾಜದ ಪರಿಕಲ್ಪನೆಗಳನ್ನು ಅರ್ಥಮಾಡಿಕೊಳ್ಳಲು ನೆರವಾಗಲಿವೆ.

ಹತ್ತು ಅಧ್ಯಾಯಗಳನ್ನೊಳಗೊಂಡ ಈ ಪಠ್ಯಪುಸ್ತಕದಲ್ಲಿ ವಿಷಯ ಮಂಡನೆಯನ್ನು ಸಂಕ್ಷಿಪ್ತವಾಗಿ, ಸರಳವಾಗಿ ನಿರೂಪಿಸಲಾಗಿದೆ. ಹಂತಹಂತವಾಗಿ ವಿದ್ಯಾರ್ಥಿಗಳ ಸ್ವಯಂ ಕಲಿಕೆಗೆ ಉತ್ತೇಜನ ನೀಡುವಂತೆ ಮತ್ತು ಅವರಲ್ಲಿ ಸ್ವಯಂಚಿಂತನೆ ಬೆಳಸಲು ಪ್ರೇರಕವಾಗುವಂತೆ ಪಠ್ಯಪುಸ್ತಕವನ್ನು ರಚಿಸಲಾಗಿದೆ. ಪ್ರತಿ ಅಧ್ಯಾಯದ ಕೊನೆಯಲ್ಲಿ ನೀಡಿರುವ ಅಭ್ಯಾಸಗಳು ವಿದ್ಯಾರ್ಥಿಗಳಲ್ಲಿ ಚರ್ಚೆ ಮತ್ತು ವಿಚಾರ ವಿನಿಮಯದಂತಹ ಚಟುವಟಿಕೆಗಳಲ್ಲಿ ಭಾಗವಹಿಸುವ ಅವಕಾಶವನ್ನು ಒದಗಿಸುತ್ತವೆ.

ಈ ಪಠ್ಯಪುಸ್ತಕವನ್ನು ಸಿದ್ಧಪಡಿಸುವಲ್ಲಿ ಸಹಕರಿಸಿದ ಪಠ್ಯಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಿಗೆ, ಸದಸ್ಯರಿಗೆ, ಪರಿಶೀಲಕರಿಗೆ, ಪಠ್ಯಪುಸ್ತಕಗಳನ್ನು ಸುಂದರವಾಗಿ ಮುದ್ರಿಸಿದ ಮುದ್ರಕರಿಗೆ ಹಾಗೂ ಈ ಕಾರ್ಯದಲ್ಲಿ ಸಹಕರಿಸಿದ ಸಮಸ್ತರಿಗೂ ಕರ್ನಾಟಕ ಪಠ್ಯಪುಸ್ತಕ ಸಂಘದ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ. ವಿದ್ಯಾರ್ಥಿಗಳು ಪಠ್ಯಪುಸ್ತಕದ ಮೂಲಕ ಪ್ರೇರಣೆ ಪಡೆದು, ಸಾಮಾಜಿಕ ಪರಿಸರದ ಗುಣಾತ್ಮಕ ಮೌಲ್ಯಗಳನ್ನು ರೂಢಿಸಿಕೊಂಡು ಉತ್ತಮ ಪ್ರಜೆಗಳಾಗಿ

ರೂಪುಗೊಳ್ಳಲೆಂದು ಕರ್ನಾಟಕ ಪಠ್ಯಪುಸ್ತಕ ಸಂಘವು ಆಶಿಸುತ್ತದೆ.

ಡಾ. ಬರಗೂರು ರಾಮಚಂದ್ರಪ್ಪ, ಅಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ (ರಿ) ಬೆಂಗಳೂರು.

## ಅಧ್ಯಕ್ಷರ ನುಡಿ

ಸಮಾಜಶಾಸ್ತ್ರವು ಸಮಾಜವಿಜ್ಞಾನಗಳಲ್ಲಿ ಅತ್ಯಂತ ಕುತೂಹಲಕಾರಿಯೂ ಹಾಗೂ ಆಸಕ್ತಿದಾಯಕವೂ ಆದ ವಿಷಯವಾಗಿದೆ. ಸಮಾಜ, ಸಂಸ್ಕೃತಿ, ಕುಟುಂಬ, ಧರ್ಮ, ಮಗುವಿನ ಬೆಳವಣಿಗೆ, ಲಿಂಗತಾರತಮ್ಯ, ನಿರ್ಲಕ್ಷಿತ ಜನಸಮುದಾಯಗಳು, ಜಾಗತೀಕರಣ, ಭಾಷೆ, ಮೊದಲಾದ ವಿಷಯಗಳನ್ನು ಸಮಾಜಶಾಸ್ತ್ರವು ಕೂಲಂಕುಷವಾಗಿ ಅಧ್ಯಯನ ಮಾಡುತ್ತದೆ. ಇದರಿಂದಾಗಿ ಸಮಾಜದ ಸೂಕ್ಷ್ಮವಾದ ವಿಚಾರಗಳು ನಮ್ಮ ಅರಿವಿಗೆ ಬರುತ್ತವೆ. ಇದು ಏಕಕಾಲದಲ್ಲಿ ಸಮಾಜಶಾಸ್ತ್ರವನ್ನು ಪಾಠ ಮಾಡುವ ಅಧ್ಯಾಪಕರಲ್ಲಿ ಮತ್ತು ಅಧ್ಯಯನ ಮಾಡುವ ವಿಧ್ಯಾರ್ಥಿಗಳಲ್ಲಿ ಸಮಾಜಶಾಸ್ತ್ರೀಯ ಪ್ರತಿಭೆಯನ್ನು ಬೆಳೆಸುತ್ತದೆ. ಈ ಪ್ರತಿಭೆಯು ಪ್ರತಿಯೊಂದು ಸಾಮಾಜಿಕ ವಿಧ್ಯಮಾನವನ್ನು ಯಾವುದೇ ಪೂರ್ವಾಗ್ರಹವಿಲ್ಲದೆ ಸಮತೋಲನದಿಂದ ವೈಜ್ಞಾನಿಕವಾಗಿ ಗ್ರಹಿಸಲು ನೆರವಾಗುತ್ತದೆ.

ಭಾರತೀಯ ಸಮಾಜವು ವೈವಿಧ್ಯಮಯವಾಗಿದೆ. ಒಂದು ಪ್ರದೇಶದ ಜನರ ಸಂಸ್ಕೃತಿ ಮತ್ತೊಂದು ಪ್ರದೇಶದ ಜನರಿಗೆ ವಿಚಿತ್ರವಾಗಿ ಕಾಣಬಹುದು. ಒಂದು ಧರ್ಮದ ಆಚರಣೆಯು ಮತ್ತೊಂದು ಧರ್ಮದ ಆಚರಣೆಗಿಂತ ವಿಭಿನ್ನವಾಗಿರುತ್ತದೆ. ಉಡುಪು, ಭಾಷೆ, ಆಹಾರ ಪದ್ಧತಿ, ಜೀವನವಿಧಾನ, ಆಯಾ ಭೌಗೋಳಿಕ ಪ್ರದೇಶದ ಲಕ್ಷಣಗಳನ್ನು ಆಧರಿಸಿರುತ್ತದೆ. ಮೇಲಿನ ವಿಷಯಗಳು ಬಹಳ ಸಂವೇದನಾಶೀಲ ಮತ್ತು ಸೂಕ್ಷ್ಮವಾಗಿರುತ್ತವೆ. ಇವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳದಿದ್ದರೆ ಭಾರತೀಯ ಸಮಾಜದ ಐಕ್ಯತೆ ಮತ್ತು ಸಮಗ್ರತೆಗೆ ದಕ್ಕೆಯುಂಟು ಮಾಡುತ್ತದೆ.

ಶಾಲಾ ದಿನಗಳಿಂದಲೇ ವಿದ್ಯಾರ್ಥಿಗಳು ಸಮಾಜವನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ತರಬೇತಿಯನ್ನು ಹೊಂದುವುದು ಅವಶ್ಯಕ. ಇದು ಆರೋಗ್ಯಕರ ಶೈಕ್ಷಣಿಕ ವ್ಯಕ್ತಿತ್ವವನ್ನು ರೂಪಿಸುತ್ತದೆ. ಈ ದೃಷ್ಟಿಯಿಂದ ಪ್ರೌಢಶಾಲೆ ಹಂತದಿಂದ ಮಕ್ಕಳಿಗೆ ಸಮಾಜಶಾಸ್ತ್ರವನ್ನು ಪರಿಚಯಿಸುವ ಕೆಲಸವನ್ನು ಮಾಡುತ್ತಿರುವುದು ಸ್ವಾಗತಾರ್ಹ.

ಪ್ರೌಢಶಾಲಾ ವಿಧ್ಯಾರ್ಥಿಗಳಿಗಾಗಿ ಪಾಠವನ್ನು ಬರೆಯುವಾಗ ಎಚ್ಚರಿಕೆಯನ್ನು ವಹಿಸಲಾಗಿದೆ. ಕಷ್ಟಕರವಾದ ಪರಿಕಲ್ಪನೆಗಳನ್ನು ಸರಳ ಭಾಷೆಯಲ್ಲಿ ಹೇಳಲು ಪ್ರಯತ್ನಿಸಲಾಗಿದೆ. ಅಗತ್ಯವಿರುವೆಡೆ ಸಮಕಾಲೀನ ಉದಾಹರಣೆಗಳನ್ನು ನೀಡಲಾಗಿದೆ. ಪೂರಕವಾದ ಚಿತ್ರಗಳನ್ನು ಬಳಸಿ ಆಕರ್ಷಕವಾದ ಪುಟ ವಿನ್ಯಾಸವನ್ನು ಅಳವಡಿಸಿಕೊಂಡಿದ್ದೇವೆ. ಇದನ್ನು ಕಾರ್ಯರೂಪಕ್ಕೆ ತರಲು ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳ ಅಧ್ಯಕ್ಷರಾದ ಡಾ. ಬರಗೂರು ರಾಮಚಂದ್ರಪ್ಪ, ಕರ್ನಾಟಕ ಪಠ್ಯಪುಸ್ತಕ ಸಂಘದ ನಿರ್ದೇಶಕರಿಗೆ, ಸಿಬ್ಬಂದಿಯವರಿಗೆ, ಸಮಾಜಶಾಸ್ತ್ರ ಪಠ್ಯ ಪುಸ್ತಕ ರಚನಾ ಸಮಿತಿ ಸದಸ್ಯರ ಸಹಕಾರವನ್ನು ಮರೆಯಲು ಸಾಧ್ಯವಿಲ್ಲ. ಈ ಪುಸ್ತಕವು ಸರಳವಾಗಿ ಹಾಗೂ ಚೊಕ್ಕವಾಗಿ ರೂಪುಗೊಂಡಿದೆ ಎಂದು ನಾವು ನಂಬಿದ್ದೇವೆ. ಇದನ್ನು ಮತ್ತಷ್ಟು ಚಂದಗೊಳಿಸುವ ಯಾವುದೇ ಸಲಹೆಗಳಿಗೆ ನಮ್ಮ ಸ್ವಾಗತವಿದೆ.

## ಪಠ್ಯಪುಸ್ತಕ ರಚನಾ ಸಮಿತಿ

**ಸಲಹೆ ಮತ್ತು ಮಾರ್ಗದರ್ಶನ:** ಡಾ. ಬರಗೂರು ರಾಮಚಂದ್ರಪ್ಪ, ಅಧ್ಯಕ್ಷರು, ರಾಜ್ಯ ಪಠ್ಯಪುಸ್ತಕ ಪರಿಷ್ಕರಣ ಸಮಿತಿಗಳು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

ಶ್ರೀ ನಾಗೇಂದ್ರ ಕುಮಾರ್, ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಅಧ್ಯಕ್ಷರು:** ಡಾ. ಲಕ್ಷ್ಮೀಪತಿ ಸಿ. ಜಿ., ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಪಿ. ಹೆಚ್. ಡಿ. ಗೃಹ ವಿಜ್ಞಾನ ಕಾಲೇಜು, ಬೆಂಗಳೂರು.

**ಸದಸ್ಯರುಗಳು:** ಡಾ. ಆದಿನಾರಾಯಣಪ್ಪ ಎನ್. ಎ., ಸಹಾಯಕ ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಸರ್ಕಾರಿ ಪದವಿ ಕಾಲೇಜು, ಸೂಲಿಬೆಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ.

ಡಾ. ವೀಣಾರಾಣಿ ಪಿ., ಸಹಾಯಕ ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಮಹಾರಾಣಿ ಮಹಿಳಾ ಕಲಾ, ವಾಣಿಜ್ಯ ಮತ್ತುನಿರ್ವಹಣಾ ಕಾಲೇಜು, ಬೆಂಗಳೂರು.

ಶ್ರೀ ನಾಗರಾಜು ಆರ್. ಕೆ., ಉಪನ್ಯಾಸಕರು, ಸಮಾಜಶಾಸ್ತ್ರ ವಿಭಾಗ, ಎಸ್. ಎಲ್. ಎನ್.

ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಕೋಟೆ, ಬೆಂಗಳೂರು.

ಶ್ರೀ ಬಿ. ಕೆ. ವಾಸುಕಿ, ಸಹಶಿಕ್ಷಕರು, ವಿವೇಕಾನಂದ ಗಿರಿಜನ ಪ್ರೌಢಶಾಲೆ, ಬಿಳಿಗಿರಿ ರಂಗನ ಬೆಟ್ಟ, ಯಳಂದೂರು ತಾಲ್ಲೂಕು, ಚಾಮರಾಜನಗರ ಜಿಲ್ಲೆ.

ಶ್ರೀ ಪಿ. ಎಂ. ಕಾಗಿನಕರ್, ಸಹಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಚಂಗಾವರ, ಶಿರಾ ತಾ. ಮಧುಗಿರಿ ಶೈಕ್ಷಣಿಕ ಜಿಲ್ಲೆ.

**ಪರಿಶೀಲಕರು:** ಡಾ. ಗುರುಲಿಂಗಯ್ಯ ಎಂ., ಪ್ರಾಧ್ಯಾಪಕರು, ಸಮಾಜಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾಲಯ. ಜ್ಞಾನಸಹ್ಯಾದ್ರಿ, ಶಿವಮೊಗ್ಗ ಹಾಗೂ ಸದಸ್ಯರು, ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಆಯೋಗ, ಬೆಂಗಳೂರು.

ಶ್ರೀಮತಿ ನಾಗಮಣಿ ಸಿ., ಉಪನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

**ಕಾರ್ಯಕ್ರಮ ಸಂಯೋಜಕರು:** ಶ್ರೀಮತಿ ಎನ್. ಎಸ್. ಸೌಮ್ಯ, ಸಹಾಯಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು.

## ಪರಿವಿಡಿ

## ಸಮಾಜಶಾಸ್ತ್ರ ಪಠ್ಯ ವಿವರ

**ಅಧ್ಯಾಯ- 1 ಭಾರತೀಯ ಸಮಾಜ ವಿವಿಧತೆಯಲ್ಲಿ ಏಕತೆ** (Indian Society- Unity in diversity)

1. ಪೀಠಿಕೆ
2. ಭೌಗೋಳಿಕ ವೈವಿಧ್ಯತೆ
3. ಸಾಂಸ್ಕೃತಿಕ ವೈವಿಧ್ಯತೆ
4. ಭಾಷಾ ವೈವಿಧ್ಯತೆ
5. ಧಾರ್ಮಿಕ ವೈವಿಧ್ಯತೆ

**ಅಧ್ಯಾಯ- 2 ಧರ್ಮ ನಿರಪೇಕ್ಷತೆ (Secularism)**

1. ಪೀಠಿಕೆ
2. ಧರ್ಮ ನಿರಪೇಕ್ಷತೆಯ ಅರ್ಥ
3. ಭಾರತದಲ್ಲಿ ಧಾರ್ಮಿಕ ಸೌಹಾರ್ದತೆಯ ಇತಿಹಾಸ
4. ಭಾರತೀಯ ಸಂವಿಧಾನ ಮತ್ತು ಧರ್ಮ ನಿರಪೇಕ್ಷತೆ
5. ಧರ್ಮ ನಿರಪೇಕ್ಷತೆ ಎದುರಿಸುತ್ತಿರುವ ಸವಾಲುಗಳು

**ಅಧ್ಯಾಯ- 3 ಜಾತಿಪದ್ಧತಿ (Caste System)**

1. ಪೀಠಿಕೆ
2. ಜಾತಿ ಪದ್ಧತಿಯ ಅರ್ಥ ಮತ್ತು ಲಕ್ಷಣಗಳು
3. ಅಸ್ಪೃಶ್ಯತೆ
4. ಪ್ರಗತಿಗೆ ಅಡ್ಡಿಯಾಗಿರುವ ಜಾತಿ

**ಅಧ್ಯಾಯ- 4 ಭಾರತದ ಗ್ರಾಮಗಳು (Indian Villages)**

1. ಪೀಠಿಕೆ
2. ಭಾರತೀಯ ಗ್ರಾಮದ ಲಕ್ಷಣಗಳು
3. ಗ್ರಾಮ ಮತ್ತು ನಗರಗಳ ನಡುವಿನ ವ್ಯಾತ್ಯಾಸ
4. ಬದಲಾಗುತ್ತಿರುವ ಭಾರತೀಯ ಗ್ರಾಮಗಳು
5. ಗ್ರಾಮೀಣ ಸಮಸ್ಯೆಗಳು
6. ರೈತರ ಆತ್ಮಹತ್ಯೆ- ಕಾರಣಗಳು

**ಅಧ್ಯಾಯ- 5 ಅಲೆಮಾರಿ ಸಮುದಾಯಗಳು (Nomadic Groups)**

1. ಪೀಠಿಕೆ
2. ಅಲೆಮಾರಿಗಳು ಎಂದರೆ ಯಾರು
3. ಅಲೆಮಾರಿ ಸಮುದಾಯದ ಲಕ್ಷಣಗಳು
4. ಅಲೆಮಾರಿ ಸಮುದಾಯಗಳ ಸಂಸ್ಕೃತಿ ಪರಿಚಯ-ಹಕ್ಕಿ ಪಿಕ್ಕಿ, ಹಂಡಿಜೋಗಿ, ಶಿಕ್ಕೇಕ್ಯಾತರು, ದೊಂಬಿದಾಸರು.
5. ಅಲೆಮಾರಿ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳು
6. ಅಲೆಮಾರಿ ಸಮುದಾಯಗಳ ಸಂಘಟನೆ

**ಅಧ್ಯಾಯ- 6 ಭಾರತದ ಸಾಮಾಜಿಕ ಸಮಸ್ಯೆಗಳು (Social problems of India)**

1. ಅನಕ್ಷರತೆ
2. ಬಡತನ ಮತ್ತು ಜೀತಪದ್ದತಿ
3. ಮಹಿಳೆಯರ ಮೇಲಿನ ದೌರ್ಜನ್ಯ
4. ಮಧ್ಯಪಾನ ಮತ್ತು ಮಾದಕ ದ್ರವ್ಯಗಳ ವ್ಯಸನ
5. ಧಾರ್ಮಿಕ ಕಲಹ

**ಅಧ್ಯಾಯ- 7 ಭಾರತೀಯ ಸಂವಿಧಾನ ಮತ್ತು ಅಸಮಾನತೆ (Indian Constitution andInequality)**

1. ಪೀಠಿಕೆ
2. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ನೀಡಿರುವ ಸೌಲಭ್ಯಗಳು
3. ಮಹಿಳೆಯರ ಸಬಲೀಕರಣ ಮತ್ತು ಕಾನೂನುಗಳು
4. ಅಲ್ಪ ಸಂಖ್ಯಾತರ ರಕ್ಷಣಾತ್ಮಕ ಕ್ರಮಗಳು
5. ಲೈಂಗಿಕ ಅಲ್ಪಸಂಖ್ಯಾತರು

**ಅಧ್ಯಾಯ- 8 ಭಾರತೀಯ ಕಾರ್ಮಿಕರು (Indian Workers)**

1. ಪೀಠಿಕೆ
2. ಕಾರ್ಮಿಕರು ಎಂದರೆ ಯಾರು?
3. ಕಾರ್ಮಿಕರ ವಿಧಗಳು- ಕೃಷಿ ಮತ್ತು ಕೈಗಾರಿಕೆ ಕಾರ್ಮಿಕರು
4. ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳು
5. ಕಾರ್ಮಿಕ ಚಳುವಳಿಗಳು ಅನುಕೂಲಗಳು ಮತ್ತು ಅನಾನುಕೂಲಗಳು
6. ಬಾಲ ಕಾರ್ಮಿಕರು

**ಅಧ್ಯಾಯ- 9 ಭಾರತೀಯ ಸಮಾಜದ ಮೇಲೆ ಜಾಗತೀಕರಣದ ಪ್ರಭಾವ (Impact of Globalization on Indian Society)**

1. ಹೊಸ ಆರ್ಥಿಕ ನೀತಿ
2. ಜಾಗತೀಕರಣ- ಅರ್ಥ, ಲಕ್ಷಣಗಳು
3. ಉದಾರೀಕರಣ- ಅರ್ಥ, ಲಕ್ಷಣಗಳು
4. ಖಾಸಗೀಕರಣ- ಅರ್ಥ, ಲಕ್ಷಣಗಳು
5. ಜಾಗತೀಕರಣದ ಅನುಕೂಲಗಳು ಮತ್ತು ಅನಾನುಕೂಲಗಳು

**ಅಧ್ಯಾಯ- 10 ಭಾರತೀಯ ಸಮಾಜಶಾಸ್ತ್ರಜ್ಞನರು (Indian Sociologists)**

1. ಜಿ. ಎಸ್. ಘುರ್ರೆ
2. ಎಮ್. ಎನ್. ಶ್ರೀನಿವಾಸ್

3. ಶ್ರೀಮತಿ ಇರಾವತಿ ಕಾರ್ವೆ

4. ಶ್ರೀಮತಿ ಸಿ ಪಾರ್ವತಮ್ಮ

5. ಪ್ರೊ. ಜೋಗನ್ ಶಂಕರ್

# ಅಧ್ಯಾಯ- 1 ಭಾರತೀಯ ಸಮಾಜದಲ್ಲಿ ವಿವಿಧತೆಯಲ್ಲಿ ಏಕತೆ (Indian Society- Unity in diversity)

**ಕಲಿಕಾಂಶಗಳು:**

1. ಭಾರತೀಯ ಸಮಾಜದಲ್ಲಿನ ಏಕತೆಯನ್ನು ತಿಳಿಯುವುದು.
2. ಭೌಗೋಳಿಕ ವೈವಿಧ್ಯತೆ ಇದೆ ಎಂಬುದನ್ನು ಅಧ್ಯಯನ ಮಾಡುವುದು.
3. ಸಮಾಜದಲ್ಲಿನ ಸಾಂಸ್ಕೃತಿಕ ವಿಭಿನ್ನತೆಯನ್ನು ಅರಿಯುವುದು.
4. ಭಾಷೆಗಳ ಮಹತ್ವವನ್ನು ತಿಳಿದು ಚರ್ಚಿಸುವುದು.

## 1.1 ಪೀಠಿಕೆ:

ಮಕ್ಕಳೇ, ನೀವು ನಿಮ್ಮ ಶಾಲೆಯಲ್ಲಿನ ಸ್ನೇಹಿತರನ್ನು ಗಮನಿಸಿ. ನೀವೆಲ್ಲರೂ ಒಂದೇ ಮನೆಯಿಂದ, ಒಂದೇ ಊರಿನಿಂದ, ಒಂದೇ ಸಮುದಾಯದಿಂದ ಬಂದಿಲ್ಲ. ಬೇರೆ ಬೇರೆ ಕಡೆಯಿಂದ ಬಂದು ಒಂದೇ ಶಾಲೆಯಲ್ಲಿ ಅಕ್ಕ ಪಕ್ಕ ಕುಳಿತು, ಪಾಠ ಕೇಳುತ್ತೀರ. ಆಟ ಆಡುವಾಗ ಜೊತೆಯಲ್ಲೇ ಆಡುತ್ತೀರ. ಯಾರಾದರೂ ಜಗಳಕ್ಕೆ ಬಂದರೆ ಒಟ್ಟಾಗಿ ಗಲಾಟೆ ಮಾಡುತ್ತೀರ. ಜೊತೆಯಲ್ಲೇ ಊಟ ಮಾಡುತ್ತೀರ. ಇದೆಲ್ಲವನ್ನು ಗಮನಿಸಿದರೆ ನಿಮಗೆ ನಾವೆಲ್ಲರೂ ಒಂದಾಗಿ ಇದ್ದೇವೆ ಎಂಬ ಭಾವನೆ ಕಂಡು ಬರುವುದಿಲ್ಲವೆ? ಇದನ್ನೇ ನಾವು ವಿವಿಧತೆಯಲ್ಲಿ ಏಕತೆ ಎಂದು ಕರೆಯುತ್ತೇವೆ. ಅಂದರೆ ಏಕತೆಯು ನಾವೆಲ್ಲರೂ ಒಂದು ಎಂಬ ಭಾವನೆಯನ್ನು ಸೂಚಿಸುತ್ತದೆ. ಭಾರತವು ಬಹುಸಂಸ್ಕೃತಿ ವಿವಿಧತೆ ಮತ್ತು ಏಕತೆಯನ್ನೊಳಗೊಂಡ ಬಹುವಿಧ ಸಮಾಜವಾಗಿದೆ. ನಮ್ಮ ದೇಶದಲ್ಲಿ ಎಷ್ಟೇ ಧರ್ಮಗಳು, ಭಾಷೆಗಳು, ಜಾತಿಗಳು, ವಿಭಿನ್ನತೆ, ಭೌಗೋಳಿಕ ವೈವಿಧ್ಯತೆ, ಜನಾಂಗ, ಬುಡಕಟ್ಟು, ಸಾಮಾಜಿಕ ಪದ್ಧತಿಗಳು, ನಂಬಿಕೆಗಳು, ಸಂಸ್ಕೃತಿ ಆದರ್ಶ, ಕಂಡು ಬಂದರೂ ಕೂಡ ಜೀವನ ವಿಧಾನದಲ್ಲಿ ಸಮಾನತೆ ಇದೆ. ಈ ಒಂದಾಗುವಿಕೆಯನ್ನು ನಾವು ವಿವಿಧತೆಯಲ್ಲಿ ಏಕತೆ ಎಂದು ಕರೆಯುತ್ತೇವೆ.

ಭಾರತವು ವಿವಿಧತೆಯಲ್ಲಿ ಏಕತೆಯನ್ನು ಹೊಂದಿದೆ ಎಂಬುದನ್ನು ತಿಳಿಯಬೇಕಾದರೆ ಈ ಕೆಳಗೆ ತಿಳಿಸಿರುವ ಅಂಶಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಅವು ಯಾವುವೆಂದರೆ

1. ಭೌಗೋಳಿಕ ವೈವಿಧ್ಯತೆ
2. ಸಾಂಸ್ಕೃತಿಕ ವೈವಿಧ್ಯತೆ
3. ಭಾಷಾ ವೈವಿಧ್ಯತೆ
4. ಧಾರ್ಮಿಕ ವೈವಿಧ್ಯತೆ

## 1.2 ಭೌಗೋಳಿಕ ವೈವಿಧ್ಯತೆ:

ಭಾರತವು 32,87,263 ಚದರ ಕಿ. ಮೀ. ವ್ಯಾಪ್ತಿಯನ್ನು ಹೊಂದಿದೆ. ಜೊತೆಗೆ ಜನಸಂಖ್ಯೆಯಲ್ಲಿ ಎರಡನೆಯ ಸ್ಥಾನವನ್ನು ಪಡೆದಿದೆ. ಕಾಶ್ಮೀರ ಹಾಗೂ ಹಿಮಾಲಯ ತಪ್ಪಲು ಪ್ರದೇಶಗಳು ಶೀತ ಪ್ರದೇಶಗಳಾಗಿದ್ದರೆ ರಾಜಾಸ್ತಾನದಲ್ಲಿ ವಿಪರೀತ ತಾಪಮಾನವಿರುತ್ತದೆ. ಕೇರಳದಲ್ಲಂತೂ ಚಳಿಗಾಲದಲ್ಲಿ ಉಷ್ಣ ಮತ್ತು ಶೀತ ಹವೆಗಳೆರಡನ್ನೂ ಕಾಣಬಹುದು. ಈಶಾನ್ಯ ಭಾಗದಲ್ಲಿ ಮಳೆ ಬೀಳುತ್ತಿದ್ದರೆ, ರಾಜಾಸ್ತಾನದ ಕೆಲವು ಪ್ರದೇಶಗಳಲ್ಲಿ ಮಳೆಯೇ ಕಾಣದ ಸ್ಥಿತಿಯಿದೆ.

ಹೀಗೆ ಭಾರತದಲ್ಲಿ ದೊಡ್ಡ, ದೊಡ್ಡ ಕಾಡುಗಳು, ಪರ್ವತಶ್ರೇಣಿಗಳು, ಸಮುದ್ರಗಳು, ಕಣಿವೆಗಳು ಹೆಚ್ಚಿನ ನದಿಗಳು, ಮರುಭೂಮಿ ಮತ್ತು ಫಲವತ್ತಾದ ಪ್ರದೇಶಗಳು, ಸಮತಟ್ಟಾದ ಭೂ ಪ್ರದೇಶಗಳು, ಹಸಿರು ಮತ್ತು ಒಣಭೂಮಿ ಹೀಗೆ ತನ್ನ ಭೌಗೋಳಿಕ ವೈವಿಧತೆಯನ್ನು ಹೊಂದಿದೆ. ಇಷ್ಟೆಲ್ಲಾ ವೈವಿಧತೆಗಳನ್ನು ಹೊಂದಿದ್ದರೂ ಕೂಡ ಭಾರತವು ಯಾವುದೇ ಭೇದ ಭಾವ ಮಾಡದೆ ಎಲ್ಲ ರೀತಿಯಲ್ಲಿಯೂ ಭೌಗೋಳಿಕ ವೈವಿಧ್ಯತೆಯನ್ನು ಕಾಣಬಹುದು.

## 1.3 ಸಾಂಸ್ಕೃತಿಕ ವೈವಿಧ್ಯತೆ:




ಮಕ್ಕಳೇ, ನಿಮ್ಮ ಶಾಲೆಯ ವತಿಯಿಂದ ಪ್ರವಾಸ ಕೈಗೊಂಡಿದ್ದೀರ ಎಂದು ಭಾವಿಸೋಣ. ನೀವು ಕೊಡಗು ಜಿಲ್ಲೆಗೆ ಹೋದಾಗ ನಿಮಗೆ ವಿಭಿನ್ನ ರೀತಿಯಲ್ಲಿ ಸೀರೆ ಉಟ್ಟಿರುವ ಮಹಿಳೆಯರನ್ನು, ಪಂಚೆ ತೊಟ್ಟಿರುವ ಪುರುಷರನ್ನು ಮತ್ತು ಕೊಡವರ

ನೃತ್ಯಗಳನ್ನು ನೋಡುತ್ತೀರ. ಹಾಗೆಯೇ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಬಂದರೆ ಅಲ್ಲಿ ಮಂಟೆಸ್ವಾಮಿ, ಮಾದೇಶ್ವರನ ಗೀತೆಗಳನ್ನು ಕೇಳುತ್ತೀರ. ಹಾಗೆಯೇ ಮೈಸೂರಿನಲ್ಲಿ ಅರಮನೆಯ ವೈಭವವಿದೆ. ತುಮಕೂರಿನಲ್ಲಿ ಕೋಲಾಟ, ಪಟ ಕುಣಿತವನ್ನು ನೋಡುತ್ತೀರ. ದಕ್ಷಿಣ ಕನ್ನಡದಲ್ಲಿ ಯಕ್ಷಗಾನ, ಬೆಳಗಾವಿಯ 'ನಾಗೇಶಿ' ಎಂಬ ಜನಪದಗೀತೆ ಪ್ರಕಾರದ ಲಾವಣಿ ಪದಗಳನ್ನು ಹಾಡುವುದನ್ನು ನೋಡಬಹುದು. ಕೋಲಾರ ಜಿಲ್ಲೆಗೆ ಬಂದರೆ ತಮಟೆ ಮತ್ತು ಓಲಗದ ಶಬ್ದವನ್ನು ಕೇಳುತ್ತೀರ. ಹೀಗೆ ಪ್ರತಿಯೊಂದು ಜಿಲ್ಲೆಯಲ್ಲೂ ವಿಭಿನ್ನ ಸಾಂಸ್ಕೃತಿಕ ವೈವಿಧ್ಯತೆಯನ್ನು ಕಾಣಬಹುದು.

ಭಾರತದಲ್ಲಿ ರಾಜ್ಯದಿಂದ ರಾಜ್ಯಕ್ಕೆ ಸಾಕಷ್ಟು ಸಾಂಸ್ಕೃತಿಕ ವ್ಯತ್ಯಾಸಗಳಿವೆ. ರಾಜಾಸ್ಥಾನದ ವೇಷಭೂಷಣ, ನೃತ್ಯ, ಆಹಾರ ಪದ್ಧತಿ ಒಂದು ರೀತಿ ಇದ್ದರೆ, ಬಿಹಾರ ಜನರ ಆಹಾರ ಪದ್ಧತಿ, ವೇಷಭೂಷಣ ಬೇರೆ ಬೇರೆಯಾಗಿರುತ್ತವೆ.

ಬುಡಕಟ್ಟು ಜನರು ಸಾಂಸ್ಕೃತಿಕ ವೈವಿಧ್ಯತೆಯನ್ನು ಹೊಂದಿದ್ದಾರೆ. ಉದಾಹರಣೆಗೆ ಹಂದಿಜೋಗಿ ಅಲೆಮಾರಿ ಸಮುದಾಯದ ಜನರು ತಲೆಗೆ ಕೆಂಪು ಜರಿಯ ಮುಂಡಾಸು ಸುತ್ತಿಕೊಳ್ಳುತ್ತಾರೆ. ಮುಂಡಾಸಿನ ಸುತ್ತ ಗಾಜಿನಕಡ್ಡಿಗೆ ಮಣಿ ಪೋಣಿಸಿಕೊಂಡಿರುತ್ತಾರೆ. ಹಾಗೆಯೇ ನವಿಲು ಗರಿಯನ್ನು ಮುಂಡಾಸಿನ ಮೇಲೆ ಅಡ್ಡ ಶಲ್ಯ, ಕಿವಿಗೆ ಮುದ್ರೆಯ ಓಲೆ. ಕೈಯಲ್ಲಿ ಕಿನ್ನರಿ, ಚಿಟಿಕೆ, ತಾಳ, ಕಾಲಿಗೆ ಗೆಜ್ಜೆ, ಹೆಗಲಿಗೆ ಜೋಳಿಗೆ ಹಾಕಿರುತ್ತಾರೆ. ಕತೆಗಳನ್ನು ಅನೇಕ ರಾತ್ರಿಗಳವರೆಗೆ ಹಾಡಬಲ್ಲರು. ಹಕ್ಕಿಪಿಕ್ಕಿಗಳು ಮಣಿಯಿಂದ ತಯಾರಾದ ಬಟ್ಟೆಗಳನ್ನು ತೊಡುವರು. ಮಣಿಯ ಹಾರಗಳನ್ನು ಹಾಕಿಕೊಳ್ಳುವರು.

ಹೀಗೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಹೋಗಿ ನೋಡಿದಾಗ ವಿವಿಧ ಸಂಸ್ಕೃತಿ, ಉಡುಪು, ವರ್ತನಾ ಮಾದರಿಗಳು, ಮೌಲ್ಯಗಳು, ಸಾಮಾಜಿಕ ನಿಯಮಗಳು, ಆಹಾರಾಭ್ಯಾಸಗಳು, ನೈತಿಕ ನಿಯಮಗಳು, ನಂಬಿಕೆಗಳು, ಧಾರ್ಮಿಕ ಆಚರಣೆಗಳು. ಮುಂತಾದವುಗಳಲ್ಲಿ ಸಾಂಸ್ಕೃತಿಕ ವೈವಿಧ್ಯತೆಯನ್ನು ಕಾಣಬಹುದು.

### 1.4 ಭಾಷಾವೈವಿಧ್ಯತೆ:

ಭಾರತ ಹಲವು ಭಾಷೆಗಳ ತವರೂರು. ಏಕೆಂದರೆ ಭಾರತದಲ್ಲಿ ವಾಸಿಸುವ ಪ್ರಜೆಯು ತಾನು ಇಚ್ಛೆಪಡುವ ಭಾಷೆಯನ್ನು ಬಳಸಬಹುದು. ಸಂವಿಧಾನದಲ್ಲಿ ಯಾವುದೇ ಭಾಷೆಯ ಯಾವುದೇ ನಿರ್ಬಂಧವಿಲ್ಲ. ಆದ್ದರಿಂದಲೇ ಎ. ಆರ್. ದೇಸಾಯಿರವರು "ಭಾರತವನ್ನು ಭಾಷೆಗಳ ಸಂಗ್ರಹಾಲಯ" ಎಂದು ಕರೆದಿದ್ದಾರೆ. ಉದಾಹರಣೆಗೆ, ಎಂದಾದರೂ ನೀವು ರಜೆಯ ಮಜವನ್ನು ಕಳೆಯಲು ಬೆಂಗಳೂರಿನಂತಹ ನಗರ ಪ್ರದೇಶಗಳಲ್ಲಿ ಇರುವ ಅಣ್ಣ, ತಮ್ಮ, ಅಕ್ಕ, ಭಾವ, ಚಿಕ್ಕಪ್ಪ, ದೊಡ್ಡಪ್ಪನ ಮನೆಗೆ ಹೋಗಲು ಬಸ್ ನಿಲ್ದಾಣಕ್ಕೆ ಬಂದು ನಿಂತರೆ, ನಿಮಗೆ ಹಲವು ಭಾಷೆಗಳ ಪರಿಚಯವಾಗುತ್ತದೆ. ಒಬ್ಬನು ಕನ್ನಡದಲ್ಲಿ ಮಾತನಾಡಿದರೆ, ಮತ್ತೊಬ್ಬ ಹಿಂದಿಯಲ್ಲಿ ಮಾತನಾಡುತ್ತಾನೆ. ಹಾಗೆಯೇ ಮಗದೊಬ್ಬನು ತೆಲುಗಿನಲ್ಲಿ ಮಾತನಾಡುತ್ತಾನೆ, ಹಾಗೆಯೇ ಕೆಲವರು ಇಂಗ್ಲೀಷ್, ತಮಿಳು, ಮರಾಠಿ, ಮಲೆಯಾಳಂ ಮುಂತಾದ ಭಾಷೆಗಳಲ್ಲಿ ಮಾತನಾಡುತ್ತಾರೆ.

ಭಾರತೀಯ ಸಂವಿಧಾನವು 8 ನೇ ಅನುಸೂಚಿಯಲ್ಲಿ ಸುಮಾರು 22 ಭಾಷೆಗಳನ್ನು ಆಡಳಿತಾತ್ಮಕ ಉದ್ದೇಶಕ್ಕಾಗಿ ಅಧಿಕೃತವಾಗಿ ಘೋಷಿಸಿದೆ. ಅವುಗಳೆಂದರೆ ಅಸ್ಸಾಮಿ, ಬೆಂಗಾಲಿ, ಗುಜರಾತಿ, ಹಿಂದಿ, ಕನ್ನಡ, ಕಾಶ್ಮೀರಿ, ಮಲಯಾಳಂ, ಮರಾಠಿ, ಒರಿಯಾ, ಪಂಜಾಬಿ, ಸಂಸ್ಕೃತ, ಸಿಂಧಿ, ತಮಿಳು, ತೆಲುಗು, ಉರ್ದು, ಮಣಿಪುರಿ, ನೇಪಾಳಿ, ಕೊಂಕಣಿ, ಸಂತಾಲಿ, ಬೊಡೊ, ಮೈಥಿಲಿ, ಮತ್ತು ಡೋಗ್ರಿ. ಇವುಗಳ ಜೊತೆಗೆ ಅಂದಾಜಿನ ಪ್ರಕಾರ ಸುಮಾರು 1652 ಕ್ಕಿಂತಲೂ ಅಧಿಕ ಆಡು ಭಾಷೆಗಳು ಭಾರತದಲ್ಲಿವೆ. ಸುಮಾರು 100 ಕ್ಕೂ ಅಧಿಕ ಭಾಷೆಗಳಲ್ಲಿ ವರ್ತಮಾನ ಪತ್ರಿಕೆಗಳು ಮುದ್ರಣವಾಗುತ್ತಿವೆ. 5000 ಕ್ಕೂ ಅಧಿಕ ವಿವಿಧ ಪತ್ರಿಕೆಗಳು ಮುದ್ರಣವಾಗುತ್ತಿವೆ.

ಭಾರತದಲ್ಲಿ ಮಾತನಾಡುವ ಭಾಷೆಗಳನ್ನು ಪ್ರಮುಖವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ

1. ಇಂಡೋ ಆರ್ಯನ್ ಭಾಷಾಕುಟುಂಬ
2. ದ್ರಾವಿಡ ಭಾಷಾಕುಟುಂಬ
3. ಆಸ್ಟ್ರಿಕ್ ಭಾಷಾಕುಟುಂಬ
4. ಸೈನೋ ಟಿಬೆಟಿಯನ್ ಭಾಷಾಕುಟುಂಬ.
5. ಇಂಡೋ ಆರ್ಯನ್ ಭಾಷಾಕುಟುಂಬ: ಈ ಕುಟುಂಬದಲ್ಲಿ ಹಿಂದಿ, ಉರ್ದು, ಪಂಜಾಬಿ, ಬೆಂಗಾಲಿ, ಒರಿಯಾ, ಗುಜರಾತಿ, ಮರಾಠಿ, ಮುಂತಾದ ಉತ್ತರ ಭಾರತದ ಭಾಷೆಗಳಲ್ಲಿ ಹೆಚ್ಚಾಗಿವೆ.
6. ದ್ರಾವಿಡ ಭಾಷಾಕುಟುಂಬ: ಈ ಕುಟುಂಬಕ್ಕೆ ದಕ್ಷಿಣ ಭಾರತದ ನಾಲ್ಕು ಪ್ರಮುಖ ಭಾಷೆಗಳು ಸೇರುತ್ತವೆ. ಅವುಗಳೆಂದರೆ ಕನ್ನಡ, ತೆಲುಗು, ತಮಿಳು, ಮತ್ತು ಮಲೆಯಾಳಂ.
7. ಆಸ್ಟ್ರಿಕ್ ಭಾಷಾಕುಟುಂಬ: ಮುಂಡಾರಿ, ಸಂತಾಲಿ, ಮೈಥಿಲಿ ಮುಂತಾದ ಭಾಷೆಗಳು ಈ ಸಮೂಹಕ್ಕೆ ಸೇರುತ್ತವೆ.
8. ಸೈನೋ ಟಿಬೆಟಿಯನ್ ಭಾಷಾಕುಟುಂಬ: ಸೈನೋ ಟಿಬೆಟಿಯನ್ನ ಭಾಷೆಗಳನ್ನು ಈಶಾನ್ಯ ವಲಯದ ಬುಡಕಟ್ಟುಗಳಿಗೆ ಸೇರಿದ ಜನರು ಮಾತನಾಡುತ್ತಾರೆ. ಸಂಪರ್ಕ ಭಾಷೆಯಾಗಿ ಇಂಗ್ಲೀಷ್, ರಾಷ್ಟ್ರೀಯ ಭಾಷೆಯಾಗಿ ಹಿಂದಿ ಮತ್ತು ಆಯಾ ಪ್ರದೇಶದಲ್ಲಿರುವ ಭಾಷೆಗಳನ್ನು ಜನರು ಬಳಸುತ್ತಾರೆ.

ಹೀಗೆ ಭಾರತ ಹಲವು ಭಾಷೆಗಳನ್ನು ಮಾತನಾಡುವ ಜನರ ಗುಂಪನ್ನು ಹೊಂದಿದ್ದರೂ, ಎಷ್ಟೇ ಸಣ್ಣ ಪುಟ್ಟಗೊಂದಲಗಳಿದ್ದರೂ, ಎಲ್ಲವನ್ನೂ ಪಕ್ಕಕ್ಕಿಟ್ಟು, ನಾವು ಎಲ್ಲರೂ ಒಂದೇ ಎಂಬ ಭಾವನೆಯನ್ನು ಹೊಂದಿರುವುದನ್ನು ಕಾಣಬಹುದು.

### 1.5 ಧಾರ್ಮಿಕ ವೈವಿಧ್ಯತೆ:

ಭಾರತದಲ್ಲಿ ಹಿಂದೂ, ಮುಸ್ಲಿಂ,ಕ್ರೈಸ್ತ, ಸಿಖ್, ಬೌದ್ಧ, ಜೈನ, ಪಾರ್ಸಿ, ಧರ್ಮಗಳಿವೆ. 2011 ರ ಜನಗಣತಿಯ ಪ್ರಕಾರ 82.7% ಹಿಂದೂಗಳು, 11.8% ಮುಸ್ಲಿಂ, 2.6% ಕ್ರಿಶ್ಚಿಯನ್ನರು, 2% ಸಿಖ್ಖರು, 0.7% ಬೌದ್ಧರು, 0.4% ಜೈನರು, 0.3% ಪಾರ್ಸಿಗಳು ಭಾರತದಲ್ಲಿ ಇದ್ದಾರೆ. ಭಾರತದಲ್ಲಿ ಹಿಂದೂಧರ್ಮದ ಜನರು ಗೌರಮ್ಮ, ಗಣೇಶ, ಮಂಗಾಳಮ್ಮ, ಹನುಮಾನ್, ಹುಲಿಯೂರಮ್ಮ, ಮಾರಮ್ಮ, ಬೈರವೇಶ್ವರ, ಗಾಳಿ ಆಂಜನೇಯ ಹೀಗೆ ಹಲವಾರು ದೇವರುಗಳನ್ನು ಪೂಜಿಸುತ್ತಾರೆ, ಹಾಗೂ ಹಿಂದೂಗಳಿಗೆ ತಮ್ಮದೇ ಆದ ಮತಾಚರಣೆಗಳಿವೆ. ಇವರು ಸಂಕ್ರಾಂತಿ, ಯುಗಾದಿ, ದೀಪಾವಳಿ, ಶಿವರಾತ್ರಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ರಾಮಾಯಣ, ಮಹಾಭಾರತವನ್ನು ಹಿಂದೂಧರ್ಮದವರ ಪವಿತ್ರಗ್ರಂಥಗಳೆಂದು ಕರೆಯುತ್ತೇವೆ. ಮುಸ್ಲಿಮರು ಅಲ್ಲಾರವರನ್ನು ಆರಾಧಿಸುತ್ತಾರೆ, ಇವರ ಪವಿತ್ರ ಗ್ರಂಥ ಕುರಾನ್. ರಂಜಾನ್, ಬಕ್ರೀದ್, ಈದ್‌ಮಿಲಾದ್ ಹಬ್ಬಗಳನ್ನು ಆಚರಿಸುತ್ತಾರೆ. ಭಾರತೀಯಕ್ರೈಸ್ತರು ಏಸುಕ್ರಿಸ್ತರವರನ್ನು ಆರಾಧಿಸುತ್ತಾರೆ, ಇವರು ರೋಮನ್ ಕ್ಯಾಥೋಲಿಕ್ ಮತ್ತು ಪ್ರೋಟೆಸ್ಟಂಟ್ ಎಂಬ ಉಪ ಪಂಗಡಗಳನ್ನು ಹೊಂದಿದ್ದಾರೆ. ಜೊತೆಗೆ ವಿವಿಧ ಚರ್ಚುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರು ಮುಖ್ಯವಾಗಿ ಕ್ರಿಸ್‌ಮಸ್ ಹಬ್ಬವನ್ನು ಆಚರಿಸುತ್ತಾರೆ. ಭಾರತದಲ್ಲಿ ಬೌದ್ಧಧರ್ಮವಿದ್ದು ಇವರ ಜನಸಂಖ್ಯೆತುಂಬಾ ಕಡಿಮೆ ಇದೆ. ಈ ಧರ್ಮವು ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತವಾಗಿದೆ. ಈ ಧರ್ಮದ ಪಂಥಗಳೆಂದರೆ ಮಹಾಯಾನ ಮತ್ತು ಹೀನಯಾನ. ಜೈನಧರ್ಮವು ಕೂಡ ಭಾರತದಲ್ಲಿ ಕಡಿಮೆ ಜನಸಂಖ್ಯೆಯನ್ನು ಹೊಂದಿದೆ. ಇವರು ಉತ್ತರ ಮತ್ತು ದಕ್ಷಿಣ ಭಾಗಗಳೆಡರಲ್ಲೂ ಕಂಡುಬರುತ್ತಾರೆ. ಈ ಧರ್ಮದ ಪಂಥಗಳೆಂದರೆ ದಿಗಂಬರ ಮತ್ತು ಶ್ವೇತಾಂಬರ. ಹೀಗೆಯೇ ಪಾರ್ಸಿ ಮತ್ತು ಸಿಖ್ ಧರ್ಮದ ಜನರು ಭಾರತದಲ್ಲಿ ವಾಸಿಸುತ್ತಿದ್ದಾರೆ, ಆದರೆ ಇವರ ಜನಸಂಖ್ಯೆ ಬೆರಳೆಣಿಕೆಯಷ್ಟಿದೆ.

ಹೀಗೆ ಭಾರತದಲ್ಲಿ ಹಲವಾರು ರೀತಿಯ ಧಾರ್ಮಿಕ ವೈವಿಧ್ಯತೆಯನ್ನು ಕಾಣಬಹುದು.

**ನಿಮಗೆ ತಿಳಿದಿರಲಿ:** ಸಿಖ್ ಧರ್ಮದ ಸಂಸ್ಥಾಪಕ ಗುರುನಾನಕ ಮತ್ತು ಅವರ ಪವಿತ್ರ ಗ್ರಂಥ ಗ್ರಂಥಸಾಹಿಬ್

## ಸಾರಾಂಶ

1. ಭಾರತವು 32, 87,263 ಚದರ ಕಿ. ಮೀ. ವ್ಯಾಪ್ತಿಯನ್ನು ಹೊಂದಿದೆ.
2. ಭಾರತವು ದೊಡ್ಡ, ದೊಡ್ಡ ಕಾಡುಗಳು, ಪರ್ವತಶ್ರೇಣಿಗಳು. ವಿಶಾಲವಾದ ಸಮುದ್ರಗಳು, ಕಣಿವೆಗಳು, ಹೆಚ್ಚಿನ ನದಿಗಳು, ಮರುಭೂಮಿ ಮತ್ತು ಫಲವತ್ತಾದ ಪ್ರದೇಶಗಳು, ಸಮತಟ್ಟಾದ ಭೂ ಪ್ರದೇಶಗಳು, ಹಸಿರು ಮತ್ತು ಒಣಭೂಮಿ ಹೀಗೆ ತನ್ನ ಭೌಗೋಳಿಕ ವೈವಿಧ್ಯತೆಯನು ಹೊಂದಿದೆ.
3. ದೇಶ ಮತ್ತು ರಾಜ್ಯದ ಪ್ರತಿ ಜಿಲ್ಲೆಗಳಲ್ಲಿಯೂ ವಿಭಿನ್ನ ಸಾಂಸ್ಕೃತಿಕ ವೈವಿಧ್ಯತೆಯನ್ನು ಕಾಣುತ್ತೇವೆ.
4. ಎ. ಆರ್. ದೇಸಾಯಿರವರು ‘ಭಾರತವನ್ನು ಭಾಷೆಗಳ ಸಂಗ್ರಹಾಲಯ’ ಎಂದು ಕರೆದಿದ್ದಾರೆ.

5. ಭಾರತೀಯ ಸಂವಿಧಾನವು 8 ನೇ ಅನುಸೂಚಿಯಲ್ಲಿ ಸುಮಾರು 22 ಭಾಷೆಗಳನ್ನು ಆಡಳಿತಾತ್ಮಕ ಉದ್ದೇಶಕ್ಕಾಗಿ ಅಧಿಕೃತವಾಗಿ ಘೋಷಿಸಿದೆ. ಅವುಗಳೆಂದರೆ ಆಸ್ಸಾಮಿ, ಬೆಂಗಾಲಿ, ಗುಜರಾತಿ, ಹಿಂದಿ, ಕನ್ನಡ, ಕಾಶ್ಮಿರಿ, ಮಲಯಾಳಂ, ಮರಾಠಿ, ಒರಿಯಾ, ಪಂಜಾಬಿ, ಸಂಸ್ಕೃತ, ಸಿಂಧಿ, ತಮಿಳು, ತೆಲುಗು, ಉರ್ದು, ಮಣಿಪುರಿ, ನೇಪಾಳಿ, ಕೊಂಕಣಿ, ಸಂತಾಲಿ, ಬೊಡೊ, ಮೈಥಿಲಿ, ಮತ್ತು ಡೊಗ್ರಿ.
6. ಅಂದಾಜಿನ ಪ್ರಕಾರ ಭಾರತದಲ್ಲಿ ಸುಮಾರು 1652 ಕ್ಕಿಂತಲೂ ಅಧಿಕ ಆಡು ಭಾಷೆಗಳಿವೆ.
7. ಭಾರತದಲ್ಲಿ ಮಾತನಾಡುವ ಭಾಷೆಗಳನ್ನು ಇಂಡೋ ಆರ್ಯನ್ ಭಾಷಾ ಕುಟುಂಬ, ದ್ರಾವಿಡ ಭಾಷಾ ಕುಟುಂಬ, ಆಸ್ಟ್ರಿಕ್ ಭಾಷಾಕುಟುಂಬ, ಸೈನೋ ಟಿಬೆಟಿಯನ್ ಭಾಷಾಕುಟುಂಬ ಎಂಬುದಾಗಿ ವಿಂಗಡಿಸಲಾಗಿದೆ.
8. ಭಾರತದಲ್ಲಿ ಹಿಂದೂ, ಮುಸ್ಲಿಂ,ಕ್ರೈಸ್ತ, ಸಿಖ್, ಬೌದ್ಧ, ಜೈನ, ಪಾರ್ಸಿ ಮತ್ತು ಯಹೂದಿ ಧರ್ಮಗಳಿವೆ.

## ಅಭ್ಯಾಸ

### I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:

1. ಭಾರತವು _______ ಚದರ ಕಿ. ಮೀ. ವ್ಯಾಪ್ತಿಯನ್ನು ಹೊಂದಿದೆ.
2. ಭಾರತ ಹಲವು _______ ತವರೂರು.
3. ಭಾರತವನ್ನು ಭಾಷೆಗಳ ಸಂಗ್ರಹಾಲಯ ಎಂದು _______ ಕರೆದರು.
4. ಭಾರತದ ಸಂವಿಧಾನವು _______ ಅನುಸೂಚಿಯಲ್ಲಿ 22 ಭಾಷೆಗಳನ್ನು ಆಡಳಿತಾತ್ಮಕ ಉದ್ದೇಶಕ್ಕಾಗಿ ಅಧಿಕೃತವಾಗಿ ಘೋಷಿಸಿದೆ.

### II. ಒಂದು ವಾಕ್ಯದಲ್ಲಿ ಉತ್ತರಿಸಿ:

1. ಕರ್ನಾಟಕದ ಮಾತೃ ಭಾಷೆಯಾವುದು?
2. ಮೈಸೂರು ನಗರವು ಯಾವುದಕ್ಕೆಪ್ರಸಿದ್ದಿಯಾಗಿದೆ?
3. ನಮ್ಮ ರಾಷ್ಟ್ರೀಯ ಭಾಷೆಯಾವುದು?
4. ಸಾಂಸ್ಕೃತಿಕ ವೈವಿಧ್ಯತೆ ಎಂದರೇನು?

### III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:

1. ವಿವಿಧತೆಯಲ್ಲಿ ಏಕತೆ ಎಂದರೇನು?
2. ಭಾರತದ ಯಾವುದಾದರೂ ನಾಲ್ಕು ಭಾಷೆಗಳ ಹೆಸರನ್ನು ತಿಳಿಸಿ.
3. ತುಮಕೂರಿನ ಯಾವುದಾದರೂ ಎರಡು ಜನಪದ ಕಲೆಗಳನ್ನು ತಿಳಿಸಿ.
4. ಭಾರತದಲ್ಲಿ ಮಾತನಾಡುವ ಭಾಷೆಗಳ ನಾಲ್ಕು ಭಾಗಗಳನ್ನು ಪಟ್ಟಿಮಾಡಿ.

### IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:

1. ಭೌಗೋಳಿಕ ವೈವಿಧತೆಯ ಬಗ್ಗೆ ಟಿಪ್ಪಣಿ ಬರೆಯಿರಿ.
2. ಭಾಷಾವೈವಿಧತೆಯನ್ನು ವಿವರಿಸಿ.
3. 'ಭಾರತವು ವೈವಿಧತೆಯಲ್ಲಿ ಏಕತೆ'. ಈ ಸಾಲಿನ ಮಹತ್ವವನ್ನು ತಿಳಿಸಿ.
4. ಭಾರತದಲ್ಲಿರುವ ಧರ್ಮಗಳು ಯಾವುವು? ಯಾವುದಾದರೂ ನಾಲ್ಕು ಧರ್ಮಗಳನ್ನು ಎರಡು ವಾಕ್ಯದಲ್ಲಿ ಬರೆಯಿರಿ.

**ಸಲಹಾತ್ಮಕ ಚಟುವಟಿಕೆಗಳು:**

1. ನಿಮ್ಮ ಮನೆಯ ಹಬ್ಬದ ಸಂದರ್ಭದಲ್ಲಿ ಆಚರಿಸುವ ಸಾಂಸ್ಕೃತಿಕ ವೈವಿಧ್ಯತೆಯ ಬಗ್ಗೆ ಬರೆದು ನಿಮ್ಮ ಶಿಕ್ಷಕರಿಗೆ ತೋರಿಸಿ.
2. ನಿಮ್ಮ ಪರಿಸರದಲ್ಲಿನ ಭಾಷಾವೈವಿಧ್ಯತೆ ಕುರಿತು ಒಂದು ವರದಿಯನ್ನು ಸಿದ್ಧಪಡಿಸಿ.

# ಅಧ್ಯಾಯ- 2 ಧರ್ಮ ನಿರಪೇಕ್ಷತೆ (Secularism)

**ಕಲಿಕಾಂಶಗಳು:**

1. ಧರ್ಮನಿರಪೇಕ್ಷತೆ ಎಂದರೇನು ಎಂಬುದನ್ನು ತಿಳಿಯುತ್ತೇವೆ.
2. ಭಾರತದಲ್ಲಿ ಧಾರ್ಮಿಕ ಸೌಹಾರ್ದತೆಯ ಇತಿಹಾಸ ತಿಳಿಯುವುದು.
3. ಧರ್ಮ ನಿರಪೇಕ್ಷತೆಯಲ್ಲಿ ಭಾರತ ಸಂವಿಧಾನದ ಪಾತ್ರವನ್ನು ಅರಿಯುವುದು.
4. ಧರ್ಮ ನಿರಪೇಕ್ಷತೆಯ ಸವಾಲುಗಳನ್ನು ತಿಳಿದು ಚರ್ಚಿಸುವುದು.

## 2.1 ಪೀಠಿಕೆ:

ಭಾರತದ ಐಕ್ಯತೆ ಮತ್ತು ನಾಗರಿಕರ ಹಕ್ಕುಗಳನ್ನು ರಕ್ಷಿಸುವ ಸಲುವಾಗಿ ಧರ್ಮ ನಿರಪೇಕ್ಷತೆಯನ್ನು ಜಾರಿಗೆ ತರಲಾಯಿತು. ಮಹಾತ್ಮ ಗಾಂಧೀಜಿ, ಭಾರತದ ಮೊದಲ ಪ್ರಧಾನಮಂತ್ರಿಗಳಾದ ಜವಹಾರಲಾಲ್ ನೆಹರು ಮತ್ತು ಸಂವಿಧಾನ ಶಿಲ್ಪಿಯಾದ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರು ಸ್ವಾತಂತ್ರಪೂರ್ವದಿಂದಲೂ ಧರ್ಮ ನಿರಪೇಕ್ಷತೆಯನ್ನು ಬೆಂಬಲಿಸುತ್ತಾ ಬಂದಿದ್ದಾರೆ. ಏಕೆಂದರೆ ಭಾರತದಲ್ಲಿ ಏಳು ಪ್ರಮುಖ ಧರ್ಮಗಳು ಅಸ್ತಿತ್ವದಲ್ಲಿವೆ. ಸಂವಿಧಾನವು ಎಲ್ಲಾ ಧರ್ಮಗಳಿಗೂ ಸಮಾನವಾದ ಪ್ರಾಶಸ್ತ್ಯವನ್ನು ನೀಡಿದೆ. ಯಾವುದೇ ಒಂದು ಧರ್ಮದ ಜನರು ಮತ್ತೊಂದು ಧರ್ಮದ ಜನರ ಮೇಲೆ ಪ್ರಾಬಲ್ಯವನ್ನು ಸಾಧಿಸುವಂತಿಲ್ಲ. ಕೇವಲ ಧರ್ಮ ಮಾತ್ರವಲ್ಲದೆ ವಿವಿಧ ಬುಡಕಟ್ಟುಗಳು, ಜಾತಿ, ಜನಾಂಗಗಳು, ತಮ್ಮದೇ ಆದ ಆಹಾರ ಪದ್ಧತಿ, ಸಂಸ್ಕೃತಿ ಆಚರಣೆಗಳನ್ನು ಹೊಂದಿದೆ. ಈ ಆಚರಣೆಗಳನ್ನು ಗೌರವಿಸುವುದು ಸಹ ನಮ್ಮ ಸಂವಿಧಾನದ ಗುರಿಯಾಗಿದೆ. ಆದುದರಿಂದ ಯಾವುದೇ ಸಂಸ್ಕೃತಿಯನ್ನು ಶ್ರೇಷ್ಠ ಎಂದಾಗಲೀ ಮತ್ತೊಂದು ಸಂಸ್ಕೃತಿಯನ್ನು ಕಡೆಗಣಿಸಲು ನಮ್ಮ ಸಂವಿಧಾನದಲ್ಲಿ ಅವಕಾಶವಿಲ್ಲ. ಸೋದರತ್ವ, ಸಮಾನತೆ, ಮತ್ತು ಸ್ವಾತಂತ್ರ್ಯ ಇವು ಭಾರತ ಸಂವಿಧಾನದ ಮೂಲ ತತ್ವಗಳಾಗಿವೆ. ಈ ಮೂಲ ತತ್ವಗಳಿಗೆ ದಕ್ಕೆಯಾಗದಂತೆ ನೋಡಿಕೊಳ್ಳಲು ಧರ್ಮ ನಿರಪೇಕ್ಷತೆ ತತ್ವವು ಅತ್ಯಂತ ಅವಶ್ಯಕವಾಗಿದೆ.

## 2.2 ಧರ್ಮ ನಿರಪೇಕ್ಷತೆ ಅರ್ಥ:

ಧರ್ಮ ನಿರಪೇಕ್ಷತೆ ಎನ್ನುವ ಪರಿಕಲ್ಪನೆಯು ಇಂಗ್ಲಿಷ್ ಭಾಷೆಯ secularism ಎನ್ನುವ ಪದದಿಂದ ಬಂದಿದೆ. ಇದು ಲಾಟಿನ್ ಭಾಷೆಯ ಸೆಕ್ಯೂಲಾರಿಸ್ ಎಂಬ ಪದದಿಂದ ಬಂದಿದೆ. ಬ್ರಿಟಿಷ್ ಚಿಂತಕ ಜಾರ್ಜ್ ಜಾಕೋಬ್ ಹಾಲಿಯೋಕೆ ಎಂಬುವವರು 1851 ರಲ್ಲಿ ಸೆಕ್ಯೂಲರಿಸಂ ಎಂಬ ಪದವನ್ನು ಬಳಸಿದರು. ಅದನ್ನು ಬಳಸುವಾಗ ಅವರು ಧರ್ಮದಿಂದ ಪ್ರತ್ಯೇಕವಾದ ಸಾಮಾಜಿಕ ವ್ಯವಸ್ಥೆಯೊಂದು ಅಸ್ತಿತ್ವದಲ್ಲಿ ಇರಬೇಕೆಂದು ಬಯಸಿದರು.

### *ಧರ್ಮ ನಿರಪೇಕ್ಷತೆ ಎಂದರೇನು?*

ಧರ್ಮ ನಿರಪೇಕ್ಷತೆ ಎಂದರೆ ಪ್ರಭುತ್ವ ಅಥವಾ ಸರ್ಕಾರವು ಯಾವುದೇ ಧಾರ್ಮಿಕ ತತ್ವಗಳು, ಮತ್ತು ಸಂಸ್ಥೆಗಳಿಂದ ದೂರವಿದ್ದು ಅಥವಾ ಆ ವಿಚಾರದಲ್ಲಿ ತಟಸ್ಥವಾಗಿದ್ದು ಆಡಳಿತವನ್ನು ನಡೆಸುವುದು.

ಧಾರ್ಮಿಕ ವಿಚಾರಗಳು ಆಡಳಿತದಲ್ಲಿ ತಲೆ ಹಾಕದಂತೆ ಎಚ್ಚರಿಕೆ ವಹಿಸುವುದು. ಜೊತೆಗೆ ಸಾರ್ವಜನಿಕ ಬದುಕಿನಲ್ಲಿ ಒಬ್ಬರ ಧಾರ್ಮಿಕ ವಿಚಾರಗಳು ಮತ್ತೊಬ್ಬರ ಗೌರವ ಮತ್ತು ಹಕ್ಕುಗಳಿಗೆ ಧಕ್ಕೆ ತರದಂತೆ ವರ್ತಿಸುವುದನ್ನು ಧರ್ಮ ನಿರಪೇಕ್ಷತೆ ಎನ್ನುತ್ತಾರೆ.

ಸರಳವಾಗಿ ಹೇಳಬೇಕೆಂದರೆ ಧಾರ್ಮಿಕ ಶಾಂತಿಯುತ ಸಹಬಾಳ್ವೆಯೇ ಧರ್ಮ ನಿರಪೇಕ್ಷತೆ. ಉದಾಹರಣೆಗೆ ಭಾರತದಲ್ಲಿ ಬಹುತೇಕ ಜನರು ಮಾಂಸಹಾರಿಗಳಾಗಿದ್ದಾರೆ. ಹಾಗೆಯೇ ಸಸ್ಯಹಾರಿಗಳು ಇದ್ದಾರೆ. ಈ ಎರಡು ಆಹಾರ ಪದ್ಧತಿಗಳನ್ನು ಗೌರವಿಸುವುದು ಎರಡು ಗುಂಪುಗಳ ಕರ್ತವ್ಯವಾಗಿದೆ.

## 2.3. ಭಾರತದಲ್ಲಿ ಧಾರ್ಮಿಕ ಸೌಹಾರ್ಧತೆಯ ಇತಿಹಾಸ:

1976 ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಮಂತ್ರಿಗಳಾಗಿದ್ದಾಗ ಸಂವಿಧಾನಕ್ಕೆ 42 ನೇ ತಿದ್ದುಪಡಿಯನ್ನು ತರಲಾಯಿತು. ಸಂವಿಧಾನದ ಪ್ರಸ್ತಾವನೆಯಲ್ಲಿ ಭಾರತವನ್ನು ಧರ್ಮ ನಿರಪೇಕ್ಷ ರಾಷ್ಟ್ರ ಎಂದು ಘೋಷಿಸಲಾಯಿತು. ಇದಕ್ಕೆ ಬಹಳ ಮುಖ್ಯವಾದ ಕಾರಣವೆಂದರೆ, ಭಾರತವು ಮೊದಲಿನಿಂದಲೂ ಅನೇಕ ಧರ್ಮ, ಭಾಷೆ, ಸಂಸ್ಕೃತಿಯ ಬೀಡಾಗಿದೆ. ಭಾರತಕ್ಕೆ ಬಂದ ಆರ್ಯರು, ಮೊಗಲರು, ಹೂಣರು, ಶಕರು, ಯೂರೋಪಿಯನ್ನರು ಮೊದಲಾದವರು ಭಾರತದ ಧಾರ್ಮಿಕ ಮತ್ತು ಸಾಂಸ್ಕೃತಿಕ ವೈವಿಧತೆಗೆ ಕಾರಣರಾದರು. ಅದರ ಫಲವಾಗಿ ನಾವು ಭಾರತದಲ್ಲಿ ಅನೇಕ ಸಂಸ್ಕೃತಿಗಳನ್ನು ಕಾಣಬಹುದು.

ಮಕ್ಕಳೇ, ನೀವು ಸಾಮ್ರಾಟ ಅಶೋಕನ ಹೆಸರನ್ನು ಕೇಳಿರಬಹುದು. ಇವರು 3 ನೇ ಶತಮಾನದಲ್ಲಿ ಭಾರತವನ್ನು ಆಳಿದ ದೊರೆ. ತನ್ನ 12 ನೇ ಶಾಸನದಲ್ಲಿ ಎಲ್ಲ ಧರ್ಮಗಳನ್ನು ಸಮಾನವಾಗಿ ಗೌರವಿಸಬೇಕೆಂದು ಕೆತ್ತಿಸಿದ್ದಾನೆ. ಮೊಗಲರ ದೊರೆಯಾದ ಅಕ್ಬರನು ಎಲ್ಲ ಧರ್ಮಗಳನ್ನು ಸಮಾನವಾಗಿ ಕಾಣಬೇಕೆಂಬ ದೃಷ್ಟಿಯಿಂದ **'ದಿನ್ ಇಲಾಹಿ'** ಎಂಬ ಹೊಸ ಧರ್ಮವನ್ನೇ ಸ್ಥಾಪಿಸಿದನು. ಮಧ್ಯಯುಗೀನ ಭಾರತದಲ್ಲಿ ಸಂತ ಕಬೀರ, ಸಂತತುಕಾರಾಮ್, ಮೀರಾಬಾಯಿ, ಗುರುನಾನಕ್ ಮೊದಲಾದವರು ಎಲ್ಲ ಧರ್ಮಗಳ ಉತ್ತಮ ತತ್ವಗಳನ್ನು ಒಳಗೊಂಡ ಸಂದೇಶಗಳನ್ನು ಸಾರಿದರು.

ಭಾರತದ ಮೊದಲ ಸ್ವಾತಂತ್ರ ಸಂಗ್ರಾಮ ಹೊರತುಪಡಿಸಿ ಬೇರೆ ಸಂದರ್ಭಗಳಲ್ಲಿ ಬ್ರಿಟೀಷರು ಭಾರತೀಯರ ಧಾರ್ಮಿಕ ವಿಚಾರಗಳಲ್ಲಿ ಮಧ್ಯಪ್ರವೇಶ ಮಾಡಲಿಲ್ಲ.

ಭಾರತದ ಧಾರ್ಮಿಕ ಸೌಹಾರ್ದ ಪರಂಪರೆ ಮತ್ತು ಮಹಾತ್ಮ ಗಾಂಧಿಯವರ ತತ್ವಗಳಿಂದ ಪ್ರಭಾವಿತರಾಗಿದ್ದ ಜವಹಾರ್ ಲಾಲ್ ನೆಹರುರವರು ಧರ್ಮನಿರಪೇಕ್ಷತೆಯ ಪ್ರತಿಪಾದಕರಾಗಿದ್ದರು. ವೈಜ್ಞಾನಿಕ ಮನೋಭಾವವನ್ನು ಹೊಂದಿದ್ದ ಪಂಡಿತ್ ನೆಹರುರವರು ಧರ್ಮನಿರಪೇಕ್ಷ ತತ್ವಕ್ಕೆ ಅಡಿಪಾಯವನ್ನು ಹಾಕಿದರು.

ಮೂಲಭೂತವಾದಿಗಳು, ಮತಾಂಧರು ಮತ್ತು ಕೋಮುವಾದಿಗಳು, ಸುಂದರವಾಗಿ ಬಾಳುತ್ತಿರುವ ಭಾರತೀಯರನ್ನು ಧರ್ಮ ಮತ್ತು ಜಾತಿ ಆಧಾರದ ಮೇಲೆ ವಿಭಜಿಸಲು ಪ್ರಯತ್ನಿಸಿದರೂ ಸಹ ಭಾರತದ ಜನಸಾಮಾನ್ಯರು ಇಂದಿಗೂ ಪರಸ್ಪರ ಗೌರವ ಮತ್ತು ಸಹಬಾಳ್ವೆಯಿಂದ ಜೀವನ ನಡೆಸುತ್ತಿರುವುದನ್ನು ಕಾಣಬಹುದು.

## 2.4 ಭಾರತೀಯ ಸಂವಿಧಾನ ಮತ್ತು ಧರ್ಮನಿರಪೇಕ್ಷತೆ

ಸಂವಿಧಾನವೇ ಭಾರತದ ಎಲ್ಲಾ ಕಾನೂನುಗಳಿಗೆ ಅಡಿಪಾಯವಾಗಿದೆ. ಭಾರತ ಸರ್ಕಾರವು ಯಾವುದೇ ಕಾನೂನುನನ್ನು ಜಾರಿಗೆ ತಂದರೂ ಸಹ ಅದಕ್ಕೆ ಭಾರತೀಯ ಸಂವಿಧಾನವನ್ನು ಅನುಸರಿಸಬೇಕು. ಸಂವಿಧಾನವು ಭಾರತದ ರಾಷ್ಟ್ರೀಯ ಉದ್ದೇಶಗಳನ್ನು ಘೋಷಿಸಿದೆ. ಅದರ ಪ್ರಕಾರ ನಾವು ಪ್ರಜಾಸತ್ತಾತ್ಮಕ, ಸಮಾಜವಾದಿ, ಧರ್ಮ ನಿರಪೇಕ್ಷ ತತ್ವಗಳನ್ನೊಳಗೊಂಡ ಒಗ್ಗಟ್ಟಿನ ರಾಷ್ಟ್ರವಾಗಿ ಮುಂದುವರಿಯಬೇಕು. ಹೀಗೆ ಮುಂದುವರಿಯುವುದು ಅಗತ್ಯವಾಗಿದೆ. ಏಕೆಂದರೆ ಭಾರತದ ಮೊದಲ ಪ್ರಧಾನಮಂತ್ರಿ ಜವಹಾರ್ ಲಾಲ್ ನೆಹರುರವರು ಘೋಷಿಸಿರುವಂತೆ ಧಾರ್ಮಿಕ ರಾಷ್ಟ್ರದಲ್ಲಿ ಧರ್ಮನಿರಪೇಕ್ಷ ದೇಶವನ್ನು ಕಟ್ಟಬೇಕಾಗಿದೆ.

ಸಂವಿಧಾನದ ಉದ್ದೇಶ ಧರ್ಮನಿರಪೇಕ್ಷ ತತ್ವದ ಆಧಾರದ ಮೇಲೆ ದೇಶವನ್ನು ಕಟ್ಟುವುದಾಗಿದ್ದರೂ ಸಹ ಸಂವಿಧಾನದಲ್ಲಿ ಅದರ ಪ್ರಸ್ತಾಪವಿರಲಿಲ್ಲ. ಆದರೆ 1976 ರಲ್ಲಿ ಸಂವಿಧಾನದ ಪ್ರಸ್ತಾವನೆಗೆ ತಿದ್ದುಪಡಿಯನ್ನು ತಂದು ಅದರಲ್ಲಿ ಧರ್ಮನಿರಪೇಕ್ಷ ಎಂಬ ಪದವನ್ನು ಸೇರಿಸಲಾಯಿತು. ನೀವು ಭಾರತ ಸಂವಿಧಾನದ ಮೊದಲ ಪುಟದಲ್ಲಿಯೇ ಕಾಣಬಹುದು. ಅದೇನೆಂದರೆ “ಭಾರತದ ಜನರಾದ ನಾವು ನಿರ್ಣಯಿಸುವುದೇನೆಂದರೆ, ಭಾರತವನ್ನು ಸಮಾಜವಾದಿ, ಪ್ರಜಾಸತ್ತಾತ್ಮಕ, ಧರ್ಮನಿರಪೇಕ್ಷ, ಪರಮಾಧಿಕಾರವುಳ್ಳ ಗಣರಾಜ್ಯವಾಗಿ ರೂಪಿಸಿಕೊಳ್ಳುತ್ತೇವೆ. ಹಾಗೆಯೇ ಸಂವಿಧಾನದ ಅನುಚ್ಛೇಧ-2 ರಲ್ಲಿ ಪ್ರಜೆಗಳಿಗೆ ಅವರವರ ಧರ್ಮವನ್ನು ಆಚರಿಸುವ ಅವಕಾಶವನ್ನು ನೀಡಲಾಗಿದೆ. ಈ ಅನುಚ್ಛೇದವು ಭಾರತದ ಯಾವುದೇ ಪ್ರಜೆಯು ತನಗೆ ಇಷ್ಟಬಂದ ಧರ್ಮವನ್ನು ಅನುಸರಿಸುವ ಹಕ್ಕನ್ನು ನೀಡಿದೆ. ಜೊತೆಗೆ ಅನುಚ್ಛೇದ 28 ರ ಪ್ರಕಾರ ಸರ್ಕಾರದ ವತಿಯಿಂದ ನಡೆಯುವ ಯಾವುದೇ ಸಂಸ್ಥೆಯಲ್ಲಿ ಧಾರ್ಮಿಕ ಆಚರಣೆಗಳನ್ನು ಮಾಡುವಂತಿಲ್ಲ. ಇದಕ್ಕೆ ಪೂರಕವಾಗಿ ಉಚ್ಚನ್ಯಾಯಾಲಯವು ಅನೇಕ ಕಾನೂನುಗಳನ್ನು ಹೊರಡಿಸಿದೆ. ಈ ಎಲ್ಲ ಅಂಶಗಳಿಂದ ತಿಳಿದು ಬರುವುದೆನೆಂದರೆ ಭಾರತದಲ್ಲಿ ಧರ್ಮನಿರಪೇಕ್ಷತೆಗೆ ಭದ್ರವಾದ ಅಡಿಪಾಯವನ್ನು ಹಾಕಿದೆ.

**ನಿಮಗೆ ತಿಳಿದಿರಲಿ:** ಡಾ. ಬಿ. ಆರ್. ಅಂಬೇಡ್ಕರ್‌ರವರನ್ನು ಭಾರತ ಸಂವಿಧಾನದ ಪಿತಾಮಹ

ಎಂದು ಕರೆಯುತ್ತಾರೆ.

## 2.5 ಧರ್ಮನಿರಪೇಕ್ಷತೆ ಎದುರಿಸುತ್ತಿರುವ ಸವಾಲುಗಳು:

ಮಕ್ಕಳೇ ಈಗಾಗಲೇ ನೀವು ಧರ್ಮನಿರಪೇಕ್ಷತೆ ಎಂದರೇನು? ಮತ್ತು ಭಾರತದಲ್ಲಿ ಧರ್ಮನಿರಪೇಕ್ಷತೆಯ ಇತಿಹಾಸವನ್ನು ತಿಳಿದುಕೊಂಡಿದ್ದೀರ, ಜೊತೆಗೆ ಭಾರತದ ಸಂವಿಧಾನದ ಮೂಲ ಅಡಿಪಾಯವೇ ಧರ್ಮ ನಿರಪೇಕ್ಷತೆ ಆಧಾರದ ಮೇಲೆ ರೂಪುಗೊಂಡಿದೆ ಎಂಬುದು ನಿಮಗೆ ತಿಳಿದಿದೆ. ಇಷ್ಟೆಲ್ಲಾ ಇದ್ದರೂ ಸಹಾ ಕೆಲವು ಬಾರಿ ಭಾರತದಲ್ಲಿ ಧಾರ್ಮಿಕ ಸಂಘರ್ಷ ಮತ್ತು ಸಾಂಸ್ಕೃತಿಕ ಘರ್ಷಣೆಗಳು ತಲೆದೊರುತ್ತೀವೆ. ಕೇವಲ ಭಾರತದಲ್ಲಿ ಮಾತ್ರವಲ್ಲ, ವಿಶ್ವದಾದ್ಯಂತ ಧರ್ಮನಿರಪೇಕ್ಷತೆಯು ಸವಾಲುಗಳನ್ನು ಎದುರಿಸುತ್ತಿವೆ. ಅಂತಹ ಧರ್ಮನಿರಪೇಕ್ಷತೆಯ ಸವಾಲುಗಳು ಯಾವುವೆಂದರೆ.

1. ಮತಬ್ಯಾಂಕಿನ ರಾಜಕಾರಣ
2. ವೈಜ್ಞಾನಿಕ ಮನೋಭಾವದ ಕೊರತೆ
3. ಬಡತನ ಮತ್ತು ನಿರುದ್ಯೋಗ
4. ಸಾಮಾಜಿಕ ಅನಕ್ಷರತೆ
5. ಕೋಮುವಾದ
6. ಧರ್ಮದ ತಪ್ಪು ವ್ಯಾಖ್ಯಾನ

### *ಧರ್ಮ ನಿರಪೇಕ್ಷತೆಯ ಸವಾಲುಗಳು*

**1. ಮತಬ್ಯಾಂಕಿನ ರಾಜಕಾರಣ:**

ಕೆಲವು ರಾಜಕೀಯ ನಾಯಕರು ಒಂದು ಧರ್ಮದ ಜನರ ಭಾವನೆಗಳನ್ನು ಪ್ರತಿಪಾದಿಸಿ ಮತ್ತೊಂದು ಧರ್ಮದ ಜನರ ಭಾವನೆಗಳನ್ನು ಅಲ್ಲಗಳೆಯುವುದರ ಮೂಲಕ ಜನರ ಓಟನ್ನು ಗಳಿಸುತ್ತಾರೆ ಮತ್ತು ಸರ್ಕಾರವನ್ನು ರಚಿಸುತ್ತಾರೆ. ಹೀಗೆ ಮಾಡುವುದರಿಂದ ಭಾರತೀಯ ಸಂವಿಧಾನದ ಧರ್ಮನಿರಪೇಕ್ಷ ತತ್ವಕ್ಕೆ ಅಡ್ಡಿಯುಂಟಾಗುತ್ತದೆ ಮತ್ತು ಜನರನ್ನು ಧರ್ಮದ ಆಧಾರದಲ್ಲಿ ವಿಭಜಿಸಿ, ಪರಸ್ಪರ ದ್ವೇಷವನ್ನು ಹುಟ್ಟುಹಾಕುತ್ತಾರೆ.

**2. ವೈಜ್ಞಾನಿಕ ಮನೋಭಾವದ ಕೊರತೆ:**

ವೈಜ್ಞಾನಿಕ ಮನೋಭಾವ ಎಂದರೆ ಯಾವುದೇ ವಿಚಾರವನ್ನು ಪಂಚೇಂದ್ರಿಯಗಳ ಮೂಲಕ ಗ್ರಹಿಸಿ ಆಧಾರಸಹಿತವಾಗಿ ಪ್ರತಿಪಾದಿಸುವುದು. ಧಾರ್ಮಿಕ ವ್ಯಕ್ತಿಗಳು ಜನರಲ್ಲಿ ವೈಜ್ಞಾನಿಕ ಮನೋಭಾವ ಬೆಳೆಯುವುದನ್ನು ಇಷ್ಟಪಡುವುದಿಲ್ಲ. ವೈಜ್ಞಾನಿಕ ಮನೋಭಾವ ಬೆಳೆದರೆ ಜನರು ಪ್ರತಿಯೊಂದನ್ನೂ ಪ್ರಶ್ನಿಸುತ್ತಾರೆ. ಈ ಪ್ರಶ್ನೆಗಳಿಗೆ ಧರ್ಮದ ಮೂಲಕ ಉತ್ತರ ಕೊಡಲು ಸಾಧ್ಯವಿಲ್ಲ. ಉದಾಹರಣೆಗೆ ಗೆಲಿಲಿಯೋ ಎಂಬ ವಿಜ್ಞಾನಿಯ ಹೆಸರನ್ನು ಕೇಳಿರುತ್ತೀರಿ. ಆ ವಿಜ್ಞಾನಿಯು ಭೂಮಿಯ ಸುತ್ತ ಸೂರ್ಯ ಸುತ್ತುವುದಿಲ್ಲ ಬದಲಾಗಿ ಸೂರ್ಯನ ಸುತ್ತ ಭೂಮಿಯು ಸುತ್ತುತ್ತದೆ ಎಂದು ವೈಜ್ಞಾನಿಕವಾಗಿ ಸತ್ಯವನ್ನು ಪ್ರತಿಪಾದಿಸಿದನು. ಆದರೆ, ಕೆಲವು ಧರ್ಮಾಂಧರು ಗೆಲಿಲಿಯೋನನ್ನು ನ್ಯಾಯಾಲಯಕ್ಕೆ ಎಳೆದು ಶಿಕ್ಷೆಯನ್ನು ನೀಡುವ ಹಂತಕ್ಕೆ ಹೋದರು. ಹೀಗೆ ಅವೈಜ್ಞಾನಿಕ ಮನೋಭಾವವು ಧರ್ಮನಿರಪೇಕ್ಷ ತತ್ವಕ್ಕೆ ಅಡ್ಡಿಯನ್ನುಂಟು ಮಾಡುತ್ತದೆ.

### 3. ಬಡತನ ಮತ್ತು ನಿರುದ್ಯೋಗ:

ಬಡತನ ಮತ್ತು ನಿರುದ್ಯೋಗ ಧರ್ಮನಿರಪೇಕ್ಷ ತತ್ವವನ್ನು ಜಾರಿಗೆ ತರಲು ಅಡ್ಡಿಯಾಗುತ್ತದೆ ಎಂದರೆ ನಿಮಗೆ ಆಶ್ಚರ್ಯವಾಗಬಹುದು. ಬಡತನ, ನಿರುದ್ಯೋಗ ಮತ್ತು ಧರ್ಮಾಂಧತೆಗೆ ನಿಕಟವಾದ ಸಂಬಂಧವಿರುತ್ತದೆ. ಯಾವುದಾದರೂ ವಿವಿಧ ಧರ್ಮಗಳ ನಡುವೆ ಧಾರ್ಮಿಕ ಸಂಘರ್ಷ ನಡೆದಾಗ ಬಡತನದಲ್ಲಿರುವ ನಿರುದ್ಯೋಗಿ ಯುವಕರನ್ನು ಹುಡುಕಿ ಧಾರ್ಮಿಕ ಕಲಹಕ್ಕೆ ಬಳಸಿಕೊಳ್ಳಲಾಗುತ್ತದೆ. ತಮ್ಮ ಬಡತನಕ್ಕೆ ಯಾವುದೋ ಧರ್ಮದ ಜನ ಕಾರಣ ಎಂದು ಅವರಲ್ಲಿ ಕೆಲವು ರಾಜಕೀಯ ನಾಯಕರು ಅನುಮಾನವನ್ನು ಬಿತ್ತುತ್ತಾರೆ. ಉದಾಹರಣೆಗೆ, ಜರ್ಮನಿಯ ಜನರು ಹಿಂದುಳಿಯುವುದಕ್ಕೆ ಯಹೂದಿಯರೇ ಕಾರಣ ಎಂದು ಹಿಟ್ಲರನು ಅಪಪ್ರಚಾರ ಮಾಡಿದನು. ಯಹೂದಿಗಳಿಗೆ ತೊಂದರೆ ಕೊಡುವ ತಂಡಕ್ಕೆ ನಾಜಿ ಸೈನ್ಯವೆನ್ನುತ್ತಾರೆ. ನಾಜಿ ಸೈನ್ಯಕ್ಕೆ ಬಡತನದಲ್ಲಿರುವ ನಿರುದ್ಯೋಗಿ ಯುವಕರನ್ನು ಸೇರಿಸಿಕೊಳ್ಳಲಾಯಿತು. ಇದರ ಮೂಲಕ ತಿಳಿದು ಬರುವುದೇನೆಂದರೆ ಪರೋಕ್ಷವಾಗಿ ಬಡತನ ಮತ್ತು ನಿರುದ್ಯೋಗಗಳು ಧರ್ಮಗಳ ಒಗ್ಗಟ್ಟನ್ನು ಒಡೆಯಲು ಕಾರಣವಾಗಬಹುದು.

### 4. ಸಾಮಾಜಿಕ ಅನಕ್ಷರತೆ:

ಅನಕ್ಷರತೆಯಲ್ಲಿ ಎರಡು ವಿಧಗಳಿವೆ. ಅವು ಯಾವುವೆಂದರೆ ಓದಲು, ಬರೆಯಲು ಬರದೇ ಇರುವುದು ಮತ್ತೊಂದು ತನ್ನ ಸುತ್ತಮುತ್ತಲ ಸಮಾಜದ ಬಗ್ಗೆ ಅರಿವಿಲ್ಲದೆ ಇರುವುದು. ಸುತ್ತಮುತ್ತಲ ಸಮಾಜದ ಅರಿವಿಲ್ಲದೇ ಇರುವ ವ್ಯಕ್ತಿಯು ಬಾವಿಯೊಳಗಿನ ಕಪ್ಪೆಯಂತಿರುತ್ತಾನೆ. ತನ್ನ ಜಾತಿಯೇ ಸರಿ, ತನ್ನ ಧರ್ಮವೇ ಸರಿ ಎಂಬ ಭಾವನೆಯನ್ನು ತಳೆಯುತ್ತಾನೆ. ಅವನಿಗೆ ಸಮಾಜದಲ್ಲಿರುವ ಬಹುಸಂಸ್ಕೃತಿ, ಭಾಷೆ, ಇವುಗಳ ಪರಿಚಯವೇ ಇರುವುದಿಲ್ಲ. ಯಾವುದೋ ಒಂದು ಧರ್ಮದ ಜನರ ಬಗ್ಗೆ ತಪ್ಪು ತಿಳಿದುಕೊಳ್ಳುತ್ತಾನೆ. ಏಕೆಂದರೆ, ಇತರ ಧರ್ಮದ ಜನರ ಜೊತೆ ಅವನು ಬೆರೆತಿರುವುದಿಲ್ಲ. ಆದುದರಿಂದ ಅವುಗಳ ಬಗೆಗೆ ಪೂರ್ವಾಗ್ರಹ ದ್ವೇಷ ಮೊದಲಾದವುಗಳನ್ನು ಬೆಳೆಸಿಕೊಳ್ಳುವ ಸಾಧ್ಯತೆ ಇರುತ್ತದೆ. ಇಂತಹಾ ಭಾವನೆಗಳಿಂದ ಧರ್ಮಗಳ ನಡುವಿನ ಸೌಹಾರ್ದತೆಗೆ ಧಕ್ಕೆ ಉಂಟಾಗುತ್ತದೆ.

### 5. ಕೋಮುವಾದ:

ಕೋಮುವಾದವೆಂದರೆ ಒಂದು ಧರ್ಮದ ಜನ ಮತ್ತೊಂದು ಧರ್ಮವನ್ನು ದ್ವೇಷಿಸುವುದು. ಜೊತೆಗೆ ತಮ್ಮ ಧರ್ಮವೇ ಶ್ರೇಷ್ಠ ಇತರ ಧರ್ಮಗಳು ಕೀಳು ಎಂದು ಭಾವಿಸುವುದು. ಧರ್ಮನಿರಪೇಕ್ಷ ತತ್ವವು ಎಲ್ಲ ಧರ್ಮಗಳನ್ನು ಸಮಾನವಾಗಿ ಕಾಣುತ್ತದೆ. ಅದು ಯಾವುದೇ ಧರ್ಮವನ್ನು ಮೇಲು ಅಥವಾ ಕೀಳು ಎಂದು ಭಾವಿಸುವುದಿಲ್ಲ. ಕೋಮುವಾದವು ಧರ್ಮಗಳ ನಡುವೆ ಪರಸ್ಪರ ದ್ವೇಷವನ್ನು ಹುಟ್ಟುಹಾಕಿ ಘರ್ಷಣೆಗೆ ಕಾರಣವಾಗುತ್ತದೆ. ಭಾರತದಲ್ಲಿ ಧರ್ಮನಿರಪೇಕ್ಷ ತತ್ವಕ್ಕೆ ಕೋಮುವಾದವು ದೊಡ್ಡ ಸವಾಲಾಗಿರುವುದನ್ನು ಗುರುತಿಸಬಹುದು.

### 6. ಧರ್ಮದ ತಪ್ಪು ವ್ಯಾಖ್ಯಾನ:

ಎಲ್ಲಾ ಧರ್ಮಗ್ರಂಥಗಳೂ ಒಳ್ಳೆಯದನ್ನೇ ಪ್ರತಿಪಾದಿಸುತ್ತವೆ. ಆದರೆ ಕೆಲವು ಧರ್ಮಾಂಧರು ಧರ್ಮಗ್ರಂಥಗಳಲ್ಲಿರುವ ಒಳ್ಳೆಯ ವಿಚಾರಗಳನ್ನು ತಿರುಚಿ ತಪ್ಪು ವ್ಯಾಖ್ಯಾನ ನೀಡಿ ಇತರ ಧರ್ಮದ ಜನರನ್ನು ಕೊಲ್ಲಲು ಹಿಂಸಿಸಲು ಪ್ರೇರೆಪಿಸುತ್ತಾರೆ. ಈ ರೀತಿ ಮಾಡುವುದರಿಂದ ಭಾರತೀಯ ಸಂವಿಧಾನದ ಆಶಯಗಳಿಗೆ ಧಕ್ಕೆ ಉಂಟಾಗುವುದರ ಜೊತೆಗೆ ಧರ್ಮನಿರಪೇಕ್ಷ ತತ್ವಕ್ಕೂ ಅಪಾಯ ಉಂಟಾಗುತ್ತದೆ. ಮೇಲಿನ ವಿಚಾರಗಳನ್ನು ತಿಳಿದುಕೊಂಡ ಮೇಲೆ ನಮಗೆ ಧರ್ಮನಿರಪೇಕ್ಷ ತತ್ವದ ಮಹತ್ವ ಅರ್ಥವಾಗುತ್ತದೆ. ನಮ್ಮ ಭಾರತ ದೇಶವು ಸದೃಢವಾಗಿ ಅಭಿವೃದ್ಧಿಯ ಹಾದಿಯಲ್ಲಿ ಮುಂದುವರಿಯಬೇಕಾದರೆ ಜಾತಿ, ಧರ್ಮ, ಭಾಷೆ, ಪ್ರಾದೇಶಿಕತೆ ಮೊದಲಾದ ಭಾವನೆಗಳನ್ನು ಅತಿಯಾಗಿ ಪೋಷಿಸದೆ, ಧರ್ಮನಿರಪೇಕ್ಷ ತತ್ವದ ಆಧಾರದಲ್ಲಿ ದೇಶಪ್ರೇಮವನ್ನು ಬೆಳೆಸಿಕೊಳ್ಳಬೇಕಾಗುತ್ತದೆ.

## ಸಾರಾಂಶ

1. ಭಾರತದ ಮೊದಲ ಪ್ರಧಾನಮಂತ್ರಿ ಜವಾಹರಲಾಲ್ ನೆಹರು,
2. ಭಾರತದ ಸಂವಿಧಾನ ಶಿಲ್ಪಿ ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ರವರು.
3. ಬ್ರಿಟೀಷ್ ಚಿಂತಕ ಜಾರ್ಜ್ ಜಾಕೋಬ್ ಹಾಲಿಯೋಕೆ ಎಂಬುವವರು 1851 ರಲ್ಲಿ ಸೆಕ್ಯೂಲರಿಸಂ ಎಂಬ ಪದವನ್ನು ಬಳಸಿದರು.
4. ಧರ್ಮ ನಿರಪೇಕ್ಷತೆ ಎಂದರೆ ಪ್ರಭುತ್ವ ಅಥವಾ ಸರ್ಕಾರವು ಯಾವುದೇ ಧಾರ್ಮಿಕತತ್ವಗಳು ಮತ್ತು ಸಂಸ್ಥೆಗಳಿಂದ ದೂರವಿದ್ದು ಅಥವಾ ಆ ವಿಚಾರದಲ್ಲಿ ತಟಸ್ಥವಾಗಿದ್ದು ಆಡಳಿತವನ್ನು ನಡೆಸುವುದು.
5. 1976 ರಲ್ಲಿ ಶ್ರೀಮತಿ ಇಂದಿರಾಗಾಂಧಿಯವರು ಪ್ರಧಾನಮಂತ್ರಿಗಳಾಗಿದ್ದಾಗ ಸಂವಿಧಾನಕ್ಕೆ 42 ನೇ ತಿದ್ದುಪಡಿಯನ್ನು ತರಲಾಯಿತು.

6. 1976 ರಲ್ಲಿ ಸಂವಿಧಾನದ ಪ್ರಸ್ತಾವನೆಗೆ ತಿದ್ದುಪಡಿಯನ್ನು ತಂದು ಅದರಲ್ಲಿ 'ಧರ್ಮನಿರಪೇಕ್ಷ' ಎಂಬ ಪದವನ್ನು ಸೇರಿಸಲಾಯಿತು.
7. ಮತಬ್ಯಾಂಕಿನ ರಾಜಕಾರಣ, ವೈಜ್ಞಾನಿಕ ಮನೋಭಾವದ ಕೊರತೆ, ಬಡತನ ಮತ್ತು ನಿರುದ್ಯೋಗ, ಸಾಮಾಜಿಕ ಅನಕ್ಷರತೆ, ಕೋಮುವಾದ, ಧರ್ಮದ ತಪ್ಪು ವ್ಯಾಖ್ಯಾನ ಇವುಗಳನ್ನು ಧರ್ಮ ನಿರಪೇಕ್ಷತೆಯ ಸವಾಲುಗಳು ಎಂದು ಕರೆಯುತ್ತೇವೆ.
8. ಕೋಮುವಾದವೆಂದರೆ ಒಂದು ಧರ್ಮದ ಜನ ಮತ್ತೊಂದು ಧರ್ಮವನ್ನು ದ್ವೇಷಿಸುವುದು.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. ಭಾರತದ ಮೊದಲ ಪ್ರಧಾನಮಂತ್ರಿ _______ .
2. ಧರ್ಮನಿರಪೇಕ್ಷತೆ ಎಂಬ ಪದವು ಲ್ಯಾಟಿನ್ ಭಾಷೆಯ _______ ಪದದಿಂದ ಬಂದಿದೆ.
3. 1976 ರಲ್ಲಿ ಸಂವಿಧಾನದ ಪ್ರಸ್ತಾವನೆಗೆ ತಿದ್ದುಪಡಿಯನ್ನು ತಂದು _______ ಎಂಬ ಪದವನ್ನು ಸೇರಿಸಲಾಯಿತು.
4. ಧರ್ಮನಿರಪೇಕ್ಷ ತತ್ವದ ಆಧಾರದಲ್ಲಿ_______ ಬೆಳೆಸಿಕೊಳ್ಳಬೇಕಾಗುತ್ತದೆ.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಭಾರತೀಯ ಸಂವಿಧಾನದ ಪಿತಾಮಹ ಯಾರು?
2. ಧರ್ಮನಿರಪೇಕ್ಷತೆಯನ್ನು ವ್ಯಾಖ್ಯಾನಿಸಿ.
3. ಸೆಕ್ಯೂಲರಿಸಂ ಪದವನ್ನು ಮೊದಲು ಬಳಸಿದವರು ಯಾರು?
4. ಕೋಮುವಾದ ಎಂದರೇನು?

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

1. ವೈಜ್ಞಾನಿಕ ಮನೋಭಾವನೆ ಎಂದರೇನು?
2. ಭಾರತಕ್ಕೆ ಬಂದ ವಿದೇಶಿಗರು ಯಾರು?
3. ಹಾರ್ವೆ ಕೋಕ್‌ರವರ ಪ್ರಕಾರ ಧರ್ಮ ನಿರಪೇಕ್ಷತೆ ಎಂದರೇನು?
4. ಬಡತನ ಎಂದರೇನು?

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಭಾರತದ ಸಂವಿಧಾನದ ಬಗ್ಗೆ ಬರೆಯಿರಿ.
2. ಭಾರತದಲ್ಲಿ ಧಾರ್ಮಿಕ ಸೌಹಾರ್ದತೆಯ ಇತಿಹಾಸವನ್ನು ವಿವರಿಸಿ.
3. ಬಡತನ ಮತ್ತು ನಿರುದ್ಯೋಗದ ಬಗ್ಗೆ ಒಂದು ಟಿಪ್ಪಣಿ ಬರೆಯಿರಿ.
4. ಧರ್ಮ ನಿರಪೇಕ್ಷತೆಯ ಸವಾಲುಗಳನ್ನು ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

1. ಡಾ. ಬಾಬಾ ಸಾಹೇಬ್ ಅಂಬೇಡ್ಕರ್ ರವರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನಿಮ್ಮ ಶಿಕ್ಷಕರ ಬಳಿ ಕೇಳಿ ಪಡೆಯಿರಿ.
2. ಒಗ್ಗಟ್ಟಿನಿಂದಾಗುವ ಉಪಯೋಗಗಳ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬರೆದು ಶಿಕ್ಷಕರಿಗೆ ತೋರಿಸಿ.

# ಅಧ್ಯಾಯ- 3 ಜಾತಿಪದ್ಧತಿ (Caste system)

**ಕಲಿಕಾಂಶಗಳು:**

1. ಪೀಠಿಕೆ.
2. ಜಾತಿ ಪದ್ಧತಿಯ ಅರ್ಥ ಮತ್ತು ಲಕ್ಷಣಗಳನ್ನು ತಿಳಿಯುವುದು.
3. ಅಸ್ಪೃಶ್ಯತೆಯ ಬಗ್ಗೆ ಮಾಹಿತಿಯನ್ನು ತಿಳಿಯುವುದು.
4. ಪ್ರಗತಿಗೆ ಅಡ್ಡಿಯಾಗಿರುವ ಜಾತಿ- ಅವಲೋಕನ.
5. ಜಾತಿ ವಿನಾಶ ಹೇಗಾಗುತ್ತದೆ ಸಮಾಜದಲ್ಲಿ.

## 3.1 ಪೀಠಿಕೆ:

ಭಾರತೀಯ ಸಮಾಜ ಜಾತಿ ವ್ಯವಸ್ಥೆಯಿಂದ ಕೂಡಿದೆ. ಬಹಳ ಹಿಂದಿನ ಕಾಲದಿಂದಲೂ ಬಂದಿರುವ ಸಾಮಾಜಿಕ ಸಂಸ್ಥೆಯಾಗಿದೆ, ಜಾತಿ ಪದ್ಧತಿ ಭಾರತಕ್ಕೆ ಮಾತ್ರ ಸೀಮಿತವಾಗಿಲ್ಲ. ಭಾರತೀಯರು ವಲಸೆ ಹೋಗಿ ಎಲ್ಲೆಲ್ಲಿ ವಾಸವಾಗಿದ್ದಾರೋ ಅಲ್ಲೆಲ್ಲ ಜಾತಿ ಪದ್ಧತಿಯನ್ನು ನೋಡಬಹುದಾಗಿದೆ, ಉದಾಹರಣೆಗೆ ಜಪಾನ್, ಬರ್ಮಾ, ಶ್ರೀಲಂಕಾ, ನೇಪಾಳ. ಮಯನ್ಮಾರ್, ಮುಂತಾದ ದೇಶಗಳಲ್ಲಿ ಜಾತಿ ಪದ್ಧತಿಯ ಅನೇಕ ಉದಾಹರಣೆಗಳನ್ನು ನೋಡಬಹುದಾಗಿದೆ.

ಜಾತಿ ಪದ್ಧತಿ ಸಾಮಾಜಿಕ ಸ್ತರವಿನ್ಯಾಸದ ಒಂದು ವಿಶಿಷ್ಟ ರೂಪವಾಗಿದೆ, ಭಾರತೀಯ ಸಮಾಜದಲ್ಲಿ ತುಂಬಾ ಆಳವಾಗಿ ಬೇರೂರಿರುವ ಕೆಟ್ಟ ಪದ್ಧತಿಯಾಗಿದೆ, ಭಾರತದಲ್ಲಿ ಭೂಮಿಯ ಒಡೆತನವೂ ಕೂಡ ಜಾತಿ ಪದ್ಧತಿಯನ್ನು ಅವಲಂಬಿಸಿದೆ. ಸಾಮಾಜಿಕ ಅಂತರವನ್ನು ಮತ್ತು ಮೇಲು ಕೀಳು ಎಂಬ ಭಾವನೆ ಜಾತಿಯ ಪ್ರಮುಖ ಲಕ್ಷಣವಾಗಿದೆ. ಈ ರೀತಿಯ ಸಾಮಾಜಿಕ ಸಂರಚನೆಯು ದೊಡ್ಡದಾದ ಪಿರಮಿಡ್‌ನಂತೆ ಕಾಣುತ್ತಿದೆ.

**ನಿಮಗಿದು ತಿಳಿದಿರಲಿ:**

ಜಿ. ಎಸ್. ಘುರ‍್ರೆರವರು ಜಾತಿ ಉಪಜಾತಿಗಳು 4000 ಕ್ಕಿಂತಲೂ ಅಧಿಕ ಇವೆ ಎಂದಿದ್ದಾರೆ.

ಜಾತಿ ಜಾತಿಗಳ ನಡುವಿನ ಅಂತರವು, ಮಡಿ ಮೈಲಿಗೆ ಎಂಬ ಸಂಪ್ರದಾಯ, ಆಚರಣೆ ಮತ್ತು ಕಟ್ಟುಪಾಡುಗಳಿಂದ ತುಂಬಿದೆ. ಈ ಕಠಿಣವಾದ ಪರಿಸ್ಥಿತಿಗಳು ಸಮಾಜದಲ್ಲಿ ಒಬ್ಬ

ವ್ಯಕ್ತಿಯ ಸ್ಥಾನಮಾನವನ್ನು ನಿರ್ಧರಿಸುತ್ತಿದ್ದವು.

## 3.2 ಜಾತಿಯ ಅರ್ಥ ಮತ್ತು ಲಕ್ಷಣಗಳು:

ಜಾತಿಯು ರೂಡಿ, ಸಂಪ್ರದಾಯ, ವಿವಾಹ, ಕುಟುಂಬ, ಆಚಾರ-ವಿಚಾರಗಳಲ್ಲಿ ಹಾಸುಹೊಕ್ಕಿದೆ. ಉದಾಹರಣೆಗೆ: ನೋಡುವುದಾದರೆ ಹೋಟೆಲ್‌ಗಳ ಹೆಸರನ್ನು ಜಾತಿಯ ಆಧಾರದ ಮೇಲೆ ಇಟ್ಟುಕೊಳ್ಳುವುದು, ಕಾರು ಬೈಕುಗಳ ಮೇಲೆ ತಮ್ಮ ಹೆಸರಿನ ಮುಂದೆ ಜಾತಿ ಸೂಚಕ ಹೆಸರನ್ನು ಹೊಂದುವುದು ಇಂದು ಸಾಮಾನ್ಯವಾಗಿದೆ.

### ಜಾತಿಯ ಅರ್ಥ:

CASTE ಎಂಬ ಇಂಗ್ಲೀಷ್ ಪದದ ಕನ್ನಡ ರೂಪಾಂತರವೇ ಜಾತಿ. ಕಾಸ್ಟ್ ಎಂಬ ಪದವು ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಮೂಲದ ಕಾಸ್ಟಾ ಎಂಬ ಪದದಿಂದ ಉತ್ಪತಿಯಾಗಿದೆ. ಕಾಸ್ಟಾ ಎಂಬ ಪದಕ್ಕೆ ಜನಾಂಗ, ತಳಿ, ಅನುವಂಶೀಯತೆ ಎಂಬ ಅರ್ಥವಿದೆ.

### ಜಾತಿಯ ಲಕ್ಷಣಗಳು

ಜಾತಿ ವ್ಯವಸ್ಥೆಯು ಸಂಕೀರ್ಣವಾಗಿದೆ. ಜಾತಿಯ ಬಗ್ಗೆ ವ್ಯಾಖ್ಯಾನ ಮಾಡುವ ಬದಲಾಗಿ ಅದರ ಗುಣಲಕ್ಷಣಗಳನ್ನು ತಿಳಿಯುವುದು ಸೂಕ್ತ ಎಂದು ಸಮಾಜಶಾಸ್ತ್ರಜ್ಞರಾದ ಜಿ. ಎಸ್ ಘುರ್ರೆ ಅವರು ಅಭಿಪ್ರಾಯ ಪಟ್ಟಿದ್ದಾರೆ. ತಮ್ಮ 'ಕಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ' ಎಂಬ ಪುಸ್ತಕದಲ್ಲಿ ಜಾತಿಯ ಗುಣಲಕ್ಷಣಗಳನ್ನು ಗುರ್ತಿಸಿದ್ದಾರೆ. ಅವುಗಳೆಂದರೆ:

ಜಾತಿಯು ಸಮಾಜದ ಹೋಳು ಹೋಳಾದ ಭಾಗ

ಸಾಮಾಜಿಕ ಏಣಿ-ಶ್ರೇಣಿಯನ್ನು ಪ್ರತಿನಿಧಿಸುವುದು

ಆಹಾರದ ಮೇಲಿನ ನಿರ್ಬಂಧ

ಸಾಮಾಜಿಕ ಸಂಬಂಧಗಳ ಮೇಲಿನ ನಿರ್ಬಂಧ

ಉದ್ಯೋಗದ ಮೇಲಿನ ನಿರ್ಬಂಧ

ವಿವಾಹದ ಮೇಲಿನ ನಿರ್ಬಂಧ

### *1) ಜಾತಿಯು ಸಮಾಜದ ಹೋಳು ಹೋಳಾದ ಭಾಗ:*

ಜಾತಿಗಳು ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿವೆ. ಜಾತಿಯ ಸದಸ್ಯತ್ವವು ಹುಟ್ಟಿನಿಂದ ನಿರ್ಧಾರವಾಗುವುದರಿಂದ ಬದಲಾಯಿಸಲು ಸಾಧ್ಯವಿಲ್ಲ. ವ್ಯಕ್ತಿಯ ಅರ್ಹತೆ, ಪ್ರತಿಭೆ, ಸಾಮರ್ಥ್ಯ ಹಾಗೂ ಜಾತಿಯ ಸದಸ್ಯರುಗಳ ನಡತೆಯನ್ನು ನಿಯಂತ್ರಿಸಲು ಜಾತಿಯನ್ನು ಬಳಸಿಕೊಳ್ಳಲಾಗುತ್ತದೆ. ಪ್ರತಿ ಜಾತಿಯ ಸದಸ್ಯರುಗಳು ಸಾಂಸ್ಕೃತಿಕವಾಗಿ, ರಾಜಕೀಯವಾಗಿ, ಆಡಳಿತಾತ್ಮಕವಾಗಿ ಭಿನ್ನವಾಗಿ ಗುರ್ತಿಸಿಕೊಂಡಿರುವುದರಿಂದ ಜಾತಿಯು ಸಮಾಜದ ಹೋಳು ಹೋಳಾದ ಭಾಗವಾಗಿದೆ.

*2) ಏಣಿ-ಶ್ರೇಣಿಯನ್ನು ಪ್ರತಿನಿಧಿಸುವುದು:*

ಜಿ. ಎಸ್. ಘುರ್‍ಯೆಯವರು ಭಾರತದಲ್ಲಿ ಸುಮಾರು ನಾಲ್ಕು ಸಾವಿರಕ್ಕಿಂತಲೂ ಅಧಿಕ ಜಾತಿ ಉಪಜಾತಿಗಳಿವೆ ಎಂದಿದ್ದಾರೆ. ಮೇಲು-ಕೀಳು, ಶ್ರೇಷ್ಠ-ಕನಿಷ್ಟ, ಪವಿತ್ರ-ಅಪವಿತ್ರ, ಭಾವನೆಗಳು ಜನರಲ್ಲಿ ಇರುವುದರಿಂದ ಏಣಿ- ಶ್ರೇಣಿ ಆಧಾರಿತವಾಗಿ ಜಾತಿ ವ್ಯವಸ್ಥೆ ರೂಪಿತವಾಗಿದೆ. ಮಾನವ ಮಾನವರಲ್ಲಿ ಅಸ್ಪೃಶ್ಯತೆ ಕಂಡುಬರುವುದಲ್ಲದೆ ದೇವರು ದೇವರುಗಳ ನಡುವೆಯು ಏಣಿ ಶ್ರೇಣಿ ವ್ಯವಸ್ಥೆಯನ್ನು ವಿಸ್ತರಿಸಲಾಗಿದೆ.

*3) ಆಹಾರದ ಮೇಲಿನ ನಿರ್ಬಂಧ:*

ಸಮಾಜದ ಎಲ್ಲಾ ಜಾತಿಗಳಲ್ಲಿಯೂ ಆಹಾರಕ್ಕೆ ಸಂಬಂಧಿಸಿದಂತೆ ನಿರ್ಬಂಧಗಳಿವೆ. ಭಾರತದಲ್ಲಿ ಕಚ್ಚಾ ಮತ್ತು ಪಕ್ಕಾ ಆಹಾರಗಳೆಂಬ ನಿಯಮಗಳಿವೆ. ಪಕ್ಕಾ ಆಹಾರ ಎಂದರೆ ತುಪ್ಪದಿಂದ ತಯಾರಿಸಿದ ಆಹಾರ, ಈ ಆಹಾರವನ್ನು ಬ್ರಾಹ್ಮಣರು ಸ್ವೀಕರಿಸಬೇಕೆಂಬ ನಿಯಮ. ಕಚ್ಚಾ ಆಹಾರ ಎಂದರೆ ನೀರಿನಿಂದ ತಯಾರಿಸಿದ ಆಹಾರ, ಈ ಆಹಾರವನ್ನು ಮಧ್ಯಮ, ಕೆಳಜಾತಿದವರು ಸ್ವೀಕರಿಸಬೇಕೆಂಬ ನಿಯಮವಿದೆ.

*4) ಸಾಮಾಜಿಕ ಸಂಬಂಧಗಳ ಮೇಲಿನ ನಿರ್ಬಂಧ:*

ಸಾಮಾಜಿಕ ಸಂಬಂಧಗಳ ಮೇಲೆ ಜಾತಿ ಪದ್ಧತಿಯ ನಿರ್ಬಂಧವಿದೆ. ಈ ಹಿನ್ನಲೆಯಲ್ಲಿ ಮಡಿ- ಮೈಲಿಗೆಗಳಿಗೆ ಸಂಬಂಧಿಸಿದಂತೆ ಅರ್ಥಮಾಡಿಕೊಳ್ಳೋಣ. ಬ್ರಾಹ್ಮಣ ಮತ್ತು ಇತರೆ ಕೆಲವು ಮೇಲ್ಜಾತಿಯವರಿಗೆ ಕೆಳ ಜಾತಿಯ ಜನರ ನೆರಳು ಕೂಡ ನಮ್ಮ ಮೇಲೆ ಬೀಳಬಾರದೆಂಬ ಭಾವನೆ ಇತ್ತು. ಹಾಗೂ ಅಸ್ಪೃಶ್ಯರು ಸ್ಪರ್ಶಿಸಿದರೆ ಮೈಲಿಗೆಯಾಗುತ್ತದೆ ಎಂಬ ಭಾವನೆಯಿದೆ. ಈ ಪದ್ಧತಿ ಇವತ್ತಿಗೂ ಬದಲಾಗದೆ ಉಳಿದಿದೆ.

*5) ಉದ್ಯೋಗದ ಮೇಲಿನ ನಿರ್ಬಂಧ:*

ನಮ್ಮ ಸಮಾಜದಲ್ಲಿ ಬಹುಕಾಲದಿಂದಲೂ ಜಾತಿ ಆಧಾರಿತ ಉದ್ಯೋಗಗಳು ಅಸ್ತಿತ್ವದಲ್ಲಿವೆ. ಬ್ರಾಹ್ಮಣರು- ವೇದಾಧ್ಯಯನ, ಪುರೋಹಿತ್ಯ, ಪೂಜೆ, ಅಧ್ಯಾಪನ, ಚಮ್ಮಾರರು ಚಪ್ಪಲಿ ಹೊಲೆಯುವುದು, ಕುಂಬಾರ- ಮಡಿಕೆ ಮಾಡುವುದು, ಬಡಗಿ ಮರದ ಕೆಲಸ ಮಾಡುವುದು, ಒಕ್ಕಲಿಗ ಕೃಷಿ ಮಾಡುವುದು, ಕ್ಷೌರಿಕರು- ಕೂದಲು ಕತ್ತರಿಸುವುದು. ವಂಶಪಾರಂಪರ್ಯವಾಗಿ ಬಂದ ಕಸುಬುಗಳಾಗಿದ್ದವು. ಬೀದಿ ಗುಡಿಸುವುದು, ಚರ್ಮ ಹದ

ಮಾಡುವುದು, ಸತ್ತ ಪ್ರಾಣಿಗಳ ಚರ್ಮ ಸುಲಿಯುವುದು ಅಸ್ಪೃಶ್ಯರು ಅನುಸರಿಸಿದ ಉದ್ಯೋಗಗಳಾಗಿದ್ದವು. ಉದ್ಯೋಗದ ಮೇಲೆ ನಿರ್ಬಂಧ ಮತ್ತು ಮಡಿ- ಮೈಲಿಗೆಯ ಭಾವನೆ ಇದ್ದುದರಿಂದ ಅದನ್ನು ಬದಲಾಯಿಸಲು ಆಗುತ್ತಿರಲಿಲ್ಲ.

*6) ವಿವಾಹದ ಮೇಲಿನ ನಿರ್ಬಂಧ:*

ತನ್ನ ಜಾತಿಗೆ ಸೇರಿದವರನ್ನು ಮಾತ್ರ ವಿವಾಹವಾಗುವ ವ್ಯವಸ್ಥೆ ಜಾರಿಯಲ್ಲಿದೆ. ಇಲ್ಲಿ ಅಂತರ್ ಜಾತಿ ವಿವಾಹಗಳಿಗೆ ಅನುಮತಿ ಇಲ್ಲ. ಇದರಿಂದ ಜಾತಿ ವ್ಯವಸ್ಥೆ ಬಲವಾಗಿ ವರದಕ್ಷಣೆ, ಕಿರುಕುಳ, ಹಿಂಸೆ, ಮರ್ಯಾದೆ ಗೇಡು ಹತ್ಯೆ ಕಂಡುಬರುತ್ತಿವೆ.

## 3.3 ಅಸ್ಪೃಶ್ಯತೆ:

ಜಾತಿಯಿಂದ ಉಂಟಾಗಿರುವ ಅನಿಷ್ಟ ಪದ್ಧತಿಯೆಂದರೆ ಅಸ್ಪೃಶ್ಯತೆ. ಇದು ಹಿಂದೂ ಸಮಾಜದಲ್ಲಿನ ಅತ್ಯಂತ ಅವಹೇಳನಕಾರಿಯಾದ ಹಾಗೂ ಕಳಂಕ ಪೂರಿತವಾದ ವ್ಯವಸ್ಥೆಯಾಗಿದೆ. ಇದೊಂದು ಸಾಂಪ್ರದಾಯಿಕ ಹಿಂದೂ ಸಮಾಜದ ಕ್ರೂರ ಆಚರಣೆ. ಈ ಆಚರಣೆಯು ಭಾರತೀಯರನ್ನು ಸತತವಾಗಿ ಶೋಷಣೆ, ದಬ್ಬಾಳಿಕೆ, ದೌರ್ಜನ್ಯ, ಹಿಂಸೆಗೆ ತುತ್ತಾಗುವಂತೆ ಮಾಡಿದೆ.




*ಅಸ್ಪೃಶ್ಯತೆಯ ವ್ಯಾಖ್ಯೆಗಳು:*

**ಡಾ. ಡಿ. ಎನ್. ಮಜುಮ್‌ದಾರ್ ಪ್ರಕಾರ**: ಮೇಲ್ಜಾತಿಯವರಿಂದ ಪರಂಪರಾಗತವಾಗಿ ವಿಧಿಸಲ್ಪಟ್ಟ ಮತ್ತು ಸಾಮಾಜಿಕವಾಗಿ ಹೇರಲ್ಪಟ್ಟ ವಿವಿಧ ಸಾಮಾಜಿಕ ಮತ್ತು ರಾಜಕೀಯ ಅನರ್ಹತೆಗಳಿಂದ, ದೌರ್ಬಲ್ಯಗಳಿಂದ ನರಳುತ್ತಿರುವ ಜಾತಿಗಳನ್ನು ಅಸ್ಪೃಶ್ಯ ಜಾತಿಗಳು ಎನ್ನುತ್ತಾರೆ.

**ಡಾ. ಜಿ. ಎಸ್. ಘುರ್ರೆರವರ ಪ್ರಕಾರ:** ಪರಿಶಿಷ್ಟ ಜಾತಿಗಳು ಎಂಬ ಪದವು ಸೈಮನ್ ಆಯೋಗದ ವರದಿಯಲ್ಲಿ ಉಪಯೋಗಿಸಲ್ಪಟ್ಟು ಬೆಳಕೆಯಲ್ಲಿ ಬಂದ ಪದವಾಗಿದೆ.

ಸಾಮಾನ್ಯವಾಗಿ ಹೇಳುವುದಾದರೆ ಸಾಮಾಜಿಕ ಧಾರ್ಮಿಕ, ಆರ್ಥಿಕ, ರಾಜಕೀಯ. ಶೈಕ್ಷಣಿಕ ಮುಂತಾದ ಜೀವನದ ಎಲ್ಲ ಕ್ಷೇತ್ರಗಳಲ್ಲಿಯೂ ಅನೇಕ ದೌರ್ಜನ್ಯಗಳಿಗೆ

ಒಳಗಾಗಿರುವ ಜಾತಿಗಳನ್ನೂ ಅಸ್ಪೃಶ್ಯ ಜಾತಿಗಳು ಅಥವಾ ಪರಿಶಿಷ್ಟ ಜಾತಿಗಳು ಎಂದು ಕರೆಯುತ್ತಾರೆ.

ಭಾರತೀಯ ಸಾಮಾಜಿಕ ಪರಿಸ್ಥಿತಿಯನ್ನು ವಿಶ್ಲೇಷಿಸಿದಾಗ ಅಸ್ಪೃಶ್ಯ ಜಾತಿಗೆ ಸೇರಿದ ಜನರನ್ನು ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಉದಾಹರಣೆಗೆ ಹೊಲೆಯರು, ಮಾದಿಗರು, ಚಲವಾದಿಗಳು ಸಮಗಾರರು, ಮಹಾರರು, ಚಮ್ಮಾರರು, ಮುಂತಾದ ಜಾತಿಗಳನ್ನು ಅಸ್ಪೃಶ್ಯರು ಎಂದು ಕರೆಯುತ್ತಾರೆ.

ಅಲ್ಲದೆ ಅಸ್ಪೃಶ್ಯರನ್ನು ಪಂಚಮರು, ಅನಾರ್ಯರು, ತುಳಿಯಲ್ಪಟ್ಟವರು, ಅಂತ್ಯಜರು, ಅಂತ್ಯವಾಸಿಗಳು, ಹರಿಜನರು, ದಲಿತರು ಎಂಬುದಾಗಿಯೂ ಕರೆಯುತ್ತಾರೆ.

ಸಿ. ಬಿ. ಮೆಮೋರಿಯಾರವರು ಪಟ್ಟಿಮಾಡಿರುವಂತೆ ಚಮಾರ್, ಖಾತಿಕ್, ರಿಗಿಂದ್, ಪಾಸಿ, ಕೊರಿ, ಢಾಮ್, ಧೋಬಿ, ದೂಸದ್, ಬಲಾಯಿ, ಮೋಚಿ, ಮೇಘವಾಲ್, ಆಡ್. ಬ್ಯಾಗಡಿ, ಭೂಯಿಯಾ, ಮಹಾರ್, ಮಾಂಗ್ ಜಾತಿಗಳು ಅಸ್ಪೃಶ್ಯ ಜಾತಿಗಳಾಗಿವೆ ಎಂದು ತಿಳಿಸುತ್ತಾರೆ.

## 3.4 ಪ್ರಗತಿಗೆ ಅಡ್ಡಿಯಾಗಿರುವ ಜಾತಿ:

ಜಾತಿ ವ್ಯವಸ್ಥೆಯು ಭಾರತೀಯ ಸಮಾಜದ ಪ್ರಗತಿಗೆ ಅಡ್ಡಿಯಾಗಿದೆ ಎಂಬುದನ್ನು ಈ ಕೆಳಕಂಡ ಅಂಶಗಳ ಆಧಾರದ ಮೇಲೆ ತಿಳಿದುಕೊಳ್ಳಬಹುದು.

### 1. ವ್ಯಕ್ತಿ ಸ್ವಾತಂತ್ರ್ಯ ಮತ್ತು ವ್ಯಕ್ತಿತ್ವ ವಿಕಸನಕ್ಕೆ ಅಡ್ಡಿಯಾಗಿದೆ:

ವ್ಯಕ್ತಿಗಳ ವಿಚಾರ ನಂಬಿಕೆ, ಚಿಂತನೆ, ದೃಷ್ಟಿಕೋನ, ಮುಂತಾದವುಗಳ ಮೇಲೆ ಜಾತಿಯ ಹಿಡಿತ ಬಲವಾಗಿದೆ, ಅಲ್ಲದೆ. ಅವರ ಆಹಾರ, ವಿವಾಹ, ವೇಷ-ಭೂಷಣ, ಭಾಷೆ ಊಟೋಪಚಾರ ಇವುಗಳ ಮೇಲೆ ನಿರ್ಬಂಧ ಹೇರಿದೆ.

ವ್ಯಕ್ತಿಗತವಾದ ವಿಚಾರ, ಚಿಂತನೆಗಿಂತ. ಆಸಕ್ತಿ, ಅಭಿಲಾಷೆಗಳಿಗಿಂತ ಧ್ಯೇಯೋದ್ದೇಶಗಳಿಗಿಂತ ಜಾತಿಯ ಆದೇಶ, ನಿಯಮ, ನಿರೀಕ್ಷೆಗಳೇ ಪ್ರಮುಖವಾದಾಗ ವ್ಯಕ್ತಿ ತನ್ನ ಸಾಮರ್ಥ್ಯವನ್ನು ಹೊರಗಿಡಲು ಸಾಧ್ಯವಿಲ್ಲ. ಜಾತಿಯು ಕಟ್ಟು ಪಾಡುಗಳಿಂದ ವ್ಯಕ್ತಿ ಸ್ವಾತಂತ್ರ್ಯ ಮೊಟಕುಗುತ್ತದೆ.

### 2. ಆರ್ಥಿಕ ಅಭಿವೃದ್ಧಿಗೆ ಮಾರಕ:

ಪ್ರತಿಯೊಬ್ಬ ವ್ಯಕ್ತಿಯೂ ತನ್ನದೆ ಆದ ಸಾಮರ್ಥ್ಯವನ್ನು ಹೊಂದಿರುತ್ತಾನೆ, ಆದರೆ ವೃತ್ತಿಗಳನ್ನು ವಂಶಪಾರಂಪರ್ಯವಾಗಿಯೇ ಮಾಡುತ್ತಾ ಬಂದಿರುವುದರಿಂದ ಆರ್ಥಿಕ ಕ್ಷೇತ್ರದಲ್ಲಿ ಪ್ರಗತಿ ಅಥವಾ ಅಭಿವೃದ್ಧಿಯಾಗಲು ಅವಕಾಶಗಳು ಕಡಿಮೆ, ಕಾರಣ

ಕುಲಕಸುಬನ್ನೇ ಮುಂದುವರಿಸಬೇಕೆಂಬ ಜಾತಿಯ ನಿಯಮ ವ್ಯಕ್ತಿಗೆ ಇಷ್ಟವಿಲ್ಲದಿದ್ದರೂ ಅದೇ ವೃತ್ತಿಯಲ್ಲಿ ಮುಂದುವರಿಯಬೇಕು. ಆಗ ವ್ಯಕ್ತಿಯ ವೈಯಕ್ತಿಕ ಸಾಮರ್ಥ್ಯ ಮತ್ತು ಪ್ರತಿಭೆಗಳು ವ್ಯರ್ಥವಾಗುತ್ತವೆ.

**3. ಸಾಮಾಜಿಕ ಪ್ರಗತಿಗೆ ಮಾರಕ:**

ಸಾಮಾಜಿಕ ಪ್ರಗತಿ ಮತ್ತು ಅಭಿವೃದ್ಧಿಗೆ ಪ್ರಗತಿಪರ ವಿಚಾರಗಳು ಆಚರಣೆಗಳು, ಮತ್ತು ಯೋಜನೆಗಳು ಜಾರಿಗೆ ಬರಬೇಕು, ಆದರೆ ಜಾತಿಯ ಸಾಂಪ್ರದಾಯಿಕತೆ, ಮೂಢನಂಬಿಕೆ. ಕಂದಾಚಾರಗಳು, ಜಾತಿಕಟ್ಟುಪಾಡುಗಳು. ಜಾತಿ ನಿಯಮಗಳಿಗೆ ಗಾಢವಾಗಿ ಅಂಟಿಕೊಂಡಿರುವುದರಿಂದ ಆಧುನಿಕ ಸಮಾಜಕ್ಕೆ ಬೇಕಾಗಿರುವ ಪ್ರಗತಿಪರ ಚಿಂತನೆಗಳಿಗೆ ಅವಕಾಶವಿರುವುದಿಲ್ಲ.

**4. ರಾಷ್ಟ್ರೀಯ ಭಾವೈಕ್ಯತೆಗೆ ಮಾರಕ:**

ಭಾರತೀಯ ಸಮಾಜದ ಪರಂಪರೆಯನ್ನು ಗಮನಿಸಿದಾಗ ಜಾತಿಯು ಭಾರತೀಯ ಸಮಾಜವನ್ನು ಚಿಕ್ಕ ಚಿಕ್ಕ ಹೋಳುಗಳಾಗಿ ವಿಭಜಿಸಿದೆ. ಬಡವ-ಶ್ರೀಮಂತ, ಮೇಲು-ಕೀಳು, ಸ್ಪರ್ಶ- ಅಸ್ಪೃಶ್ಯ, ಎಂಬ ಭಾವನೆಗಳನ್ನು ಜನರ ಮನದಲ್ಲಿ ಬೇರೂರಿಸಿ ರಾಷ್ಟ್ರೀಯ ಭಾವೈಕ್ಯತೆಗೆ ಮಾರಕವಾಗಿದೆ.

**5. ಆರೋಗ್ಯಕರವಾದ ಪ್ರಜಾಸತ್ತತೆಯ ಬೆಳವಣಿಗೆಗೆ ಅಡ್ಡಿ:**

ಅಸಮಾನತೆ ಅಮಾನವೀಯತೆ ಮತ್ತು ಸಮೂಹದ ಅಧೀನತೆಗೆ ಒತ್ತು ಕೊಡುತ್ತಿರುವ ಜಾತಿವ್ಯವಸ್ಥೆಯು ಸಮಾಜದಲ್ಲಿನ ಜನರ ನಡುವೆ ಕಂದಕಗಳನ್ನೇ ನಿರ್ಮಾಣ ಮಾಡಿದೆ.

ಪ್ರಜಾ ಪ್ರಭುತ್ವ ನಿಷ್ಠೆ ಮತ್ತು ಜಾತಿ ನಿಷ್ಠೆಗಳನ್ನು ಹೋಲಿಸಿದಾಗ ಇವೆರಡರ ಸಂಘರ್ಷದಲ್ಲಿ ಜಾತಿ ನಿಷ್ಠೆಯೇ ಉಳಿಯುವುದರಿಂದ ಜಾತಿಯು ಪ್ರಜಾಸತ್ತಾತ್ಮತೆಗೆ ಅಡ್ಡಿ ಎನ್ನಬಹುದು, ಸಮಾನತೆಯ ತತ್ವವನ್ನು ಸಾರುವ ಪ್ರಜಾಸತ್ತಾತ್ಮಕ ಅಸಮಾನತೆಯ ಮೇಲೆ ನಿಂತಿರುವ ಜಾತಿಯು ಒಂದಾಗಲಾರವು.

## ಸಾರಾಂಶ

1. ಕಾಸ್ಟ್ ಎಂಬ ಆಂಗ್ಲ ಪದವು ಸ್ಪ್ಯಾನಿಷ್ ಮತ್ತು ಪೋರ್ಚುಗೀಸ್ ಮೂಲದ ಕಾಸ್ಟಾ ಎಂಬ ಪದದಿಂದ ಬಂದಿದೆ.
2. ಕಾಸ್ಟಾ ಎಂಬ ಪದಕ್ಕೆ ಜನಾಂಗ, ತಳಿ, ಅನುವಂಶೀಯತೆ ಎಂಬ ಅರ್ಥವಿದೆ.

3. ಜಿ. ಎಸ್. ಘುರ್ರೆ "ಕಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ" ಎಂಬ ಕೃತಿಯನ್ನು ಬರೆದಿದ್ದಾರೆ.
4. ಜಿ. ಎಸ್. ಘುರ್ರೆಯವರು ಭಾರತದಲ್ಲಿ ಸುಮಾರು ನಾಲ್ಕು ಸಾವಿರಕ್ಕಿಂತಲೂ ಅಧಿಕ ಜಾತಿ ಉಪಜಾತಿಗಳಿವೆ ಎಂದಿದ್ದಾರೆ.
5. ಪಕ್ಕಾ ಆಹಾರ ಎಂದರೆ ತುಪ್ಪದಿಂದ ತಯಾರಿಸಿದ ಆಹಾರ, ಕಚ್ಚಾ ಆಹಾರ ಎಂದರೆ ನೀರಿನಿಂದ ತಯಾರಿಸಿದ ಆಹಾರ.
6. ಡಾ. ಡಿ. ಎನ್. ಮಜುಮ್‌ದಾರ್ ಪ್ರಕಾರ: ಮೇಲ್ಜಾತಿಯವರಿಂದ ಪರಂಪರಾಗತವಾಗಿ ವಿಧಿಸಲ್ಪಟ್ಟ ಮತ್ತು ಸಾಮಾಜಿಕವಾಗಿ ಹೇರಲ್ಪಟ್ಟ ವಿವಿಧ ಸಾಮಾಜಿಕ ಮತ್ತು ರಾಜಕೀಯ ಅನರ್ಹತೆಗಳಿಂದ ದೌರ್ಬಲ್ಯಗಳಿಂದ ನರಳುತ್ತಿರುವ ಜಾತಿಗಳನ್ನು ಅಸ್ಪೃಶ್ಯ ಜಾತಿಗಳು ಎನ್ನುತ್ತಾರೆ.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. ಜಾತಿ ಎಂಬ ಕನ್ನಡ ಪದವನ್ನು ಇಂಗ್ಲಿಷ್ ನಲ್ಲಿ _______ ಕರೆಯುತ್ತಾರೆ.
2. ಕಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ ಈ ಕೃತಿಯನ್ನು _______ ರವರು ಬರೆದಿದ್ದಾರೆ.
3. ಜಾತಿಯು _______ ಯಿಂದ ನಿರ್ಧಾರವಾಗುತ್ತದೆ.
4. ಭಾರತೀಯರಿಗೆ ರಾಷ್ಟ್ರೀಯತೆಯ ಭಾವನೆಯು ತಿಳಿದಿಲ್ಲ ಎಂದವರು _______ .

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಜಾತಿ ಎಂದರೇನು?
2. ಜಾತಿ ವಿನಾಶ ಎಂದರೇನು?
3. ಬಡಗಿಯ ಕೆಲಸ ಯಾವುದು?

4. ಪ್ರಗತಿಗೆ ಅಡ್ಡಿಯಾಗುತ್ತಿರುವುದಕ್ಕೆ ಒಂದು ಕಾರಣ ನೀಡಿ.

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

1. ಜಾತಿಯನ್ನು ವ್ಯಾಖ್ಯಾನಿಸಿ.
2. ಪಕ್ಕ ಮತ್ತು ಕಚ್ಚಾ ಆಹಾರ ಎಂದರೇನು?
3. ಅಸ್ಪೃಶ್ಯತೆ ಎಂದರೇನು?
5. ಜಾತಿ ವಿನಾಶವನ್ನು ತಡೆಗಟ್ಟಬಹುದೇ? ಚರ್ಚಿಸಿ.

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಜಾತಿಯ ಲಕ್ಷಣಗಳನ್ನು ವಿವರಿಸಿ.
2. ಅಸ್ಪೃಶ್ಯತೆಯ ಬಗ್ಗೆ ಬರೆಯಿರಿ.
3. ಜಾತಿ ವಿನಾಶದ ಬಗ್ಗೆ ಟಿಪ್ಪಣಿ ಬರೆಯಿರಿ.
4. ಪ್ರಗತಿಯ ಅಡ್ಡಿಗೆ ಜಾತಿ ಯಾವ ರೀತಿಯಲ್ಲಿ ಕಾರಣವಾಗುತ್ತಿದೆ?

**ಸಲಹಾತ್ಮಕ ಚಟುವಟಿಕೆಗಳು:**

1. ಜಾತಿ ಪದ್ಧತಿಯು ದೇಶದ ಅಭಿವೃದ್ದಿಗೆ ಮಾರಕವೇ ಅಥವಾ ಪೂರಕವೇ ಚರ್ಚಿಸಿ.

# ಅಧ್ಯಾಯ- 4 ಭಾರತದ ಗ್ರಾಮಗಳು (Indian Villages)

**ಕಲಿಕಾಂಶಗಳು:**

1. ಭಾರತೀಯ ಗ್ರಾಮಗಳ ಪಾರಂಪರಿಕ ಗುಣ-ಲಕ್ಷಣಗಳು.
2. ಗ್ರಾಮ ಹಾಗೂ ನಗರಗಳ ನಡುವಿನ ವ್ಯತ್ಯಾಸಗಳು.
3. ಬದಲಾಗುತ್ತಿರುವ ಭಾರತೀಯ ಗ್ರಾಮಗಳು.
4. ರೈತರ ಆತ್ಮಹತ್ಯೆ-ಒಂದು ಸಮಸ್ಯೆ.

## 4.1 ಪೀಠಿಕೆ:

ಮಾನವನು ವ್ಯವಸಾಯ ಮಾಡುವುದನ್ನು ಕಲಿತ ಮೇಲೆ ಆಹಾರಕ್ಕಾಗಿ ಆತ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಅಲೆಯುವುದು ಕೊನೆಗೊಂಡಿತು. ಸ್ಥಿರ ಜೀವನ ಪ್ರಾರಂಭವಾಯಿತು. ಹೀಗೆ ಕೃಷಿಗಾಗಿ ಒಂದೆಡೆ ನೆಲೆಸಿದ ಸಮುದಾಯಗಳೇ ಗ್ರಾಮ ಅಥವಾ ಹಳ್ಳಿಗಳು ಎನಿಸಿಕೊಂಡವು. ಭಾರತವು ಹಳ್ಳಿಗಳ ದೇಶ. '**ಹಳ್ಳಿಗಳ ಅಭಿವೃದ್ಧಿಯಾಗದೆ** ದೇಶದ ಅಭಿವೃದ್ಧಿ ಸಾಧ್ಯವಿಲ್ಲ' ಎಂದು ಗಾಂಧೀಜಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಹಾಗಾಗಿ ಭಾರತದ ಗ್ರಾಮಗಳ ಬಗೆಗಿನ ತಿಳುವಳಿಕೆ ಅತ್ಯವಶ್ಯಕ. ಇಂದಿಗೂ ಸಹ ಭಾರತದಲ್ಲಿ ನಗರಗಳಿಗಿಂತ ಗ್ರಾಮಗಳಲ್ಲಿಯೇ ಹೆಚ್ಚು ಜನ ವಾಸಿಸುವರು.





## 4.2 ಭಾರತೀಯ ಗ್ರಾಮಗಳ ಪಾರಂಪರಿಕ ಗುಣ- ಲಕ್ಷಣಗಳು

**1. ಚಿಕ್ಕ ಗಾತ್ರ:**

ಗ್ರಾಮವು ಗಾತ್ರದಲ್ಲಿ ಚಿಕ್ಕದಾಗಿರುತ್ತದೆ. ಸಾಮಾನ್ಯವಾಗಿ ಜನಸಂಖ್ಯೆಯ ಆಧಾರದ ಮೇಲೆ ನಗರ ಹಾಗೂ ಗ್ರಾಮಗಳ ವರ್ಗೀಕರಣ ಮಾಡಲಾಗುತ್ತದೆ. ನಮ್ಮ ದೇಶದಲ್ಲಿ 5000 ಕ್ಕಿಂತಲೂ ಕಡಿಮೆ ಜನಸಂಖ್ಯೆ ಇರುವ ಸಮುದಾಯಗಳನ್ನು ಗ್ರಾಮಗಳೆಂದು ಕರೆಯಲಾಗುತ್ತದೆ. ಆದರೂ ಭಾರತದಲ್ಲಿ ಕೆಲವೇ ಕೆಲವು ಅಂದರೆ ಹತ್ತಾರು ಮನೆಗಳಿರುವ ಗ್ರಾಮಗಳೂ ಇವೆ.

**ನಿಮಗಿದು ತಿಳಿದಿರಲಿ:** 2011 ರ ಜನಗಣತಿಯ ಪ್ರಕಾರ ಭಾರತದಲ್ಲಿ ಶೇ. 68.84 ರಷ್ಟು ಜನರು 5,97,369 ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ.

**2. ಸರಳತೆ ಮತ್ತು ಸಾಮಾಜಿಕ ಏಕತೆ:**

ಗ್ರಾಮೀಣ ಜನರ ಬೇಡಿಕೆಗಳು ಪರಿಮಿತವಾಗಿರುವುದರಿಂದ ಅವರ ಜೀವನವು ಅತ್ಯಂತ ಸರಳವಾದುದು. ಹಳ್ಳಿಗರ ಉದ್ಯೋಗ ಕೃಷಿ ಆಗಿರುವುದರಿಂದ ಆಡಂಬರದ ಜೀವನ ಇಲ್ಲಿ ಕಂಡು ಬರಲಾರದು. ಹೀಗಾಗಿ ಜನರ ಜೀವನಕ್ರಮ, ಊಟ-ಉಪಚಾರ, ಆಚಾರ-ವಿಚಾರ, ಉಡುಗೆ-ತೊಡುಗೆಗಳಲ್ಲಿ ಏಕರೂಪತೆ ಕಂಡುಬರುತ್ತದೆ. ಹಿತ, ಮಿತವಾದ ಬದುಕು ಸಾಗಿಸುತ್ತಾರೆ. ಸುಗ್ಗಿಯಲ್ಲಿ ಬೆಳೆದ ಧವಸ-ಧಾನ್ಯಗಳನ್ನು ಜೋಪಾನವಾಗಿ ಸಂಗ್ರಹಿಸಿಟ್ಟು ಇಡೀ ವರ್ಷ ಎಚ್ಚರಿಕೆಯಿಂದ ಬಳಸುತ್ತಾರೆ.

**3. ಮುಖಾಮುಖಿ ಅಥವಾ ಅನ್ಯೋನ್ಯ ಸಂಬಂಧ:**

ಮುಖಾಮುಖಿ ಸಂಬಂಧ ಎಂದರೆ ಎಲ್ಲರಿಗೂ ಎಲ್ಲರೂ ಪರಿಚಿತರಾಗಿರುವುದು. ಗ್ರಾಮಿಣ ಸಮುದಾಯಗಳು ಚಿಕ್ಕದಾಗಿರುವುದರಿಂದ ಎಲ್ಲರೂ ಪರಸ್ಪರ ಪರಿಚಿತರಾಗಿರುತ್ತಾರೆ. ಹೀಗಾಗಿ ಜನರು ಮುಖಾಮುಖಿ ಸಂಬಂಧಗಳನ್ನು ಹೊಂದಿರುತ್ತಾರೆ. ಪರಸ್ಪರರನ್ನು ಮಾತನಾಡಿಸುವಾಗ ಅಕ್ಕ-ತಂಗಿ, ಅಣ್ಣ-ತಮ್ಮ, ಅತ್ತೆ-ಮಾವ, ಚಿಕ್ಕಪ್ಪ-ಚಿಕ್ಕಮ್ಮ ಎಂಬುದಾಗಿ ಕರೆಯುತ್ತಾರೆ. ಜನರು ಪರಸ್ಪರ ಸಂಪರ್ಕದಲ್ಲಿರುತ್ತಾರೆ. ಪ್ರೀತಿ, ಪರಸ್ಪರ ಸಹಕಾರ, ಆತ್ಮೀಯತೆ ಇವು ಗ್ರಾಮೀಣ ಸಮುದಾಯದಲ್ಲಿ ಕಂಡುಬರುತ್ತವೆ.

**4. ಅನೌಪಚಾರಿಕ ಸಾಮಾಜಿಕ ನಿಯಂತ್ರಣ:**

ಗ್ರಾಮೀಣ ಜನರ ಪ್ರಾಥಮಿಕ ಸಂಬಂಧಗಳು ಸಾಮಾಜಿಕ ನಿಯಂತ್ರಣವನ್ನು ಸರಳಗೊಳಿಸಿವೆ. ಹಿರಿಯರ ಆಜ್ಞೆ, ಲೋಕಾಚಾರಗಳು, ನೈತಿಕ ನಿಯಮಗಳು, ಸಂಪ್ರದಾಯಗಳು, ಪದ್ಧತಿಗಳು, ನಂಬಿಕೆಗಳು, ಮೌಲ್ಯಗಳು ಜನರ ನಡತೆಯನ್ನು ನಿಯಂತ್ರಿಸುತ್ತವೆ. ಉದಾಹರಣೆಗೆ ಗಂಡ, ಹೆಂಡತಿಯರ ನಡುವೆ ಜಗಳ ಉಂಟಾದಾಗ ಅವರು ಜಾತಿಯ ಮುಖಂಡರ ಬಳಿಗೆ ಹೋಗುತ್ತಾರೆ. ಇಂದಿಗೂ ಸಹ ಗ್ರಾಮಗಳಲ್ಲಿ ತಲೆದೋರುವ ವ್ಯಾಜ್ಯ ವಿವಾದಗಳು ಮೊದಲು ಗ್ರಾಮದ ಮುಖಂಡರ ಬಳಿ ಬರುತ್ತವೆ. ಅಲ್ಲಿಯೇ ಅವುಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಯತ್ನ ಮಾಡಲಾಗುತ್ತದೆ.

**5. ಕೂಡು (ಅವಿಭಕ್ತ) ಕುಟುಂಬದ ಪ್ರಾಮುಖ್ಯತೆ:**

ಕೃಷಿಗೆ ಹೆಚ್ಚಿನ ಸಂಖ್ಯೆಯಲ್ಲಿ ಶ್ರಮಿಕರು ಬೇಕಾಗುತ್ತಾರೆ. ಹಾಗಾಗಿ ಗ್ರಾಮಗಳಲ್ಲಿ ಕೂಡು ಕುಟುಂಬಗಳು ಹೆಚ್ಚಾಗಿ ಕಂಡುಬರುತ್ತವೆ. ಕೂಡು ಕುಟುಂಬ ಎಂದರೆ ಮೂರು, ನಾಲ್ಕು ತಲೆಮಾರಿನ ಜನ ಒಟ್ಟಿಗೆ ಒಂದೇ ಮನೆಯಲ್ಲಿ ವಾಸಿಸುವುದು. ಮನೆಯ ಎಲ್ಲ ವ್ಯವಹಾರಗಳಲ್ಲಿ ಯಜಮಾನರದೇ ಅಂತಿಮ ತೀರ್ಮಾನವಾಗಿರುತ್ತದೆ. ಸ್ತ್ರೀಯರು ಮನೆಗೆಲಸಗಳಲ್ಲಿ ತೊಡಗುವುದರ ಜೊತೆಗೆ ಹೊಲಗಳಲ್ಲಿ ಪುರುಷರಂತೆ ದುಡಿಯುತ್ತಾರೆ. ಇತ್ತೀಚೆಗೆ ಗ್ರಾಮೀಣ ಪ್ರದೇಶಗಳಲ್ಲೂ ಕೂಡು ಕುಟುಂಬಗಳ ಸಂಖ್ಯೆ ಕಡಿಮೆಯಾಗುತ್ತಿದೆ.

**6. ನಿಸರ್ಗದ ಪ್ರಭಾವ:**

ಗ್ರಾಮೀಣ ಜನರು ಯಾವಾಗಲೂ ನಿಸರ್ಗದೊಂದಿಗೆ ಸಂಪರ್ಕ ಹೊಂದಿರುತ್ತಾರೆ. ಆದ್ದರಿಂದ ಅವರ ನಂಬಿಕೆ, ಧರ್ಮ, ಸಂಪ್ರದಾಯಗಳಲ್ಲಿ ನಿಸರ್ಗದ ಛಾಯೆ ಎದ್ದು ಕಾಣುತ್ತದೆ. ಭೂಮಿ, ನದಿ, ಬೆಟ್ಟ-ಗುಡ್ಡ, ಪ್ರಾಣಿಗಳನ್ನು ದೇವರೆಂದು ಪೂಜಿಸುತ್ತಾರೆ. ಅತಿವೃಷ್ಟಿ, ಅನಾವೃಷ್ಟಿ, ಬರಗಾಲ, ಇತ್ಯಾದಿಗಳಿಗೆ ಪ್ರಕೃತಿ ದೇವತೆ ಕಾರಣ ಎಂದು ಭಾವಿಸಿ ಆಕೆಯ ಕೃಪೆಗಾಗಿ ಹಬ್ಬ-ಹರಿದಿನ, ಜಾತ್ರೆ- ಉತ್ಸವಗಳನ್ನು ಆಚರಿಸುತ್ತಾರೆ.

**7. ಕೃಷಿಯ ಪ್ರಾಧಾನ್ಯತೆ:**

ಕೃಷಿ ಭಾರತದ ಹಳ್ಳಿಗಳ ಮುಖ್ಯ ಉದ್ಯೋಗವಾಗಿದೆ. ಅಲ್ಲದೆ ಕೃಷಿಗೆ ಬೇಕಾದ ನೇಗಿಲು, ಕುಂಟೆ, ಕುರ್ಜಿಗೆ ಗಾಡಿ ವಿವಿಧ ಉಪಕರಣಗಳನ್ನು ತಯಾರು ಮಾಡುವ ಬಡಗಿಗಳು, ಕಮ್ಮಾರರು, ಚಮ್ಮಾರರು, ಗಾಣಿಗರು, ಮಡಿವಾಳರು, ಭಜಂತ್ರಿಯವರು, ತೋಟಿ-ತಳವಾರರು ಕಂಡು ಬರುತ್ತಾರೆ. ಅಲ್ಲದೆ ಕುಂಬಾರಿಕೆ, ನೂಲುವುದು, ನೇಯುವುದು ಮುಂತಾದ ಉದ್ಯೋಗಗಳು ಕಂಡುಬರುತ್ತವೆ. ಹಳ್ಳಿಗರು ಪಶುಸಂಗೋಪನೆ ಹಾಗೂ ಹತ್ತಾರು ಕರಕುಶಲ ಕಲೆಗಳನ್ನು ಬೆಳೆಸಿಕೊಂಡಿರುತ್ತಾರೆ. ಹೀಗಾಗಿ ಭಾರತ 'ಹಳ್ಳಿಗಳ ನಾಡು, ಕೃಷಿಕರ ಬೀಡು' ಎನಿಸಿಕೊಂಡಿದೆ. 'ರೈತನನ್ನು ರಾಷ್ಟ್ರದ ಬೆನ್ನೆಲುಬು' ಎಂದು ಕರೆಯಲಾಗಿದೆ.

**8. ನೆರೆಹೊರೆಯ ಪಾತ್ರ:**

ಗ್ರಾಮಗಳು ಗಾತ್ರದಲ್ಲಿ ಚಿಕ್ಕವು ಆಗಿರುವುದರಿಂದ ಜನರ ನಡುವೆ ಪರಸ್ಪರ ಪರಿಚಯ, ನೇರ ಸಂಬಂಧ, ನಿಕಟ ಬಾಂಧವ್ಯಗಳಿರುತ್ತವೆ. ಗ್ರಾಮಗಳಲ್ಲಿ ನೆರೆಹೊರೆ ಅತ್ಯಂತ ಮಹತ್ವದ ಪಾತ್ರವಹಿಸುತ್ತದೆ. ಗ್ರಾಮಸ್ಥರು ಪರಸ್ಪರ ಕೊಡುವುದು, ತೆಗೆದುಕೊಳ್ಳುವುದು, ಕಷ್ಟ-ಸುಖ, ನೋವು-ನಲಿವುಗಳಲ್ಲಿ ಭಾಗಿಯಾಗುತ್ತಾರೆ. ಹಬ್ಬ-ಹರಿದಿನ, ವಿವಾಹ-ನಾಮಕರಣ ಮುಂತಾದ ಸಂದರ್ಭಗಳಲ್ಲಿ ಒಟ್ಟಾಗಿ ಸಹಕಾರದಿಂದ ಪಾಲ್ಗೊಳ್ಳುತ್ತಾರೆ.

**9. ಧರ್ಮಶ್ರದ್ಧೆ:**

ಗ್ರಾಮೀಣ ಜನರು ದೈವೀಶಕ್ತಿಗಳಲ್ಲಿ ಅಪಾರವಾದ ಶ್ರದ್ಧೆ ಹಾಗೂ ನಂಬಿಕೆಯುಳ್ಳವರಾಗಿರುತ್ತಾರೆ. ಈ ಧಾರ್ಮಿಕ ಶ್ರದ್ಧೆಯೇ ಅವರನ್ನು ಹಲವಾರು

ಆತಂಕಗಳಿಂದ ರಕ್ಷಿಸಿದೆ ಎಂದು ಭಾವಿಸುತ್ತಾರೆ. ತಾವು ಪೂಜಿಸುವ ದೇವದೇವಿಯರ ಜಾತ್ರೆ, ಉತ್ಸವಗಳನ್ನು ವಿಜೃಂಭಣೆಯಿಂದ ಆಚರಿಸುತ್ತಾರೆ. ಉಳಮೆ ಮಾಡುವಾಗ, ಬಿತ್ತನೆ ಮಾಡುವಾಗ, ಪೈರು ಕೀಳುವಾಗ, ಬೆಳೆ ಕಟಾವು ಮಾಡುವಾಗ, ಭಗವಂತನ ಪೂಜೆ ಮಾಡುತ್ತಾರೆ. ಉದಾಹರಣೆಗೆ ಉತ್ತರ ಕರ್ನಾಟಕದಲ್ಲಿ ಭೂಮಿಯನ್ನು ಪೂಜಿಸುವ ಶೀಗಿ ಹುಣ್ಣಿಮೆ, ಹೈದರಬಾದ್ ಕರ್ನಾಟಕದ ಪ್ರದೇಶಗಳಲ್ಲಿ ಎಳ್ಳಮವಾಸ್ಯೆ ಹಬ್ಬ ಹಾಗೂ ಹಳೇ ಮೈಸೂರು ಭಾಗದಲ್ಲಿ ಸಂಕ್ರಾಂತಿ ದಿನದಂದು ಎತ್ತುಗಳಿಂದ ಕಿಚ್ಚು ಹಾಯಿಸುವ ಹಬ್ಬ ಆಚರಣೆ ಮಾಡುತ್ತಾರೆ. ತಮಗೆ ಕೃಷಿಯಲ್ಲಿ ಸಹಾಯ ಮಾಡುವ ಎತ್ತು, ದನ- ಕರುಗಳನ್ನು, ಕೃಷಿ ಉಪಕರಣಗಳನ್ನು ಪೂಜಿಸುತ್ತಾರೆ.

**10. ಸಾಂಪ್ರದಾಯಿಕ ದೃಷ್ಟಿಕೋನ:**

ಹಳ್ಳಿಗರು ಸಂಪ್ರದಾಯ, ನಿಯಮ-ನಿಷ್ಟೆಗಳಿಗೆ ಹೆಚ್ಚು ಬದ್ಧರಾಗಿರುತ್ತಾರೆ. ಹಾಗಾಗಿ ಅವರು ಬೇಗನೆ ಬದಲಾವಣೆಗಳಿಗೆ ಒಳಗಾಗುವುದಿಲ್ಲ. ಹೊಸ ವಿಚಾರಗಳು, ವಸ್ತುಗಳು ಮತ್ತು ಕ್ರಮಗಳನ್ನು ಅವರು ಯಾವಾಗಲೂ ಸಂಶಯದ ದೃಷ್ಟಿಯಿಂದ ನೋಡುತ್ತಾರೆ. ಸಮಾಜ ವಿರೋಧಿಸುವ ಯಾವುದೇ ವಿಷಯವನ್ನು ಅವರು ಒಪ್ಪುವುದಿಲ್ಲ. ಉದಾಹರಣೆ ಅಂತರ್ಜಾತಿ ವಿವಾಹ. ಹಾಗಾಗಿ ಇಲ್ಲಿ ಸಾಮಾಜಿಕ ಬದಲಾವಣೆ ಮಂದಗತಿಯಿಂದ ಸಾಗುತ್ತದೆ.

## 4.3 ಗ್ರಾಮ ಹಾಗೂ ನಗರಗಳ ನಡುವಿನ ವ್ಯತ್ಯಾಸಗಳು

**ಗ್ರಾಮ**

- ಗ್ರಾಮೀಣ ಜೀವನದಲ್ಲಿ ಏಕರೂಪತೆ ಕಂಡುಬರುವುದು.
- ಮುಖಾಮುಖಿ ಸಂಬಂಧಗಳು ಕಂಡುಬರುತ್ತವೆ.
- ಜನರು ಕೃಷಿ ಹಾಗೂ ಕೃಷಿ ಸಂಬಂಧಿತ ಉದ್ಯೋಗಗಳಲ್ಲಿ ತೊಡಗಿರುತ್ತಾರೆ.
- ವ್ಯಕ್ತಿಗಿಂತ ಕುಟುಂಬ ಮುಖ್ಯ.
- ಗ್ರಾಮೀಣರು ಸಂಪ್ರದಾಯವಾದಿಗಳು.
- ಲೋಕರೂಢಿ, ನಂಬಿಕೆ, ಆಚರಣೆಗಳು ಜನರ ನಡತೆಯನ್ನು ನಿಯಂತಿಸುತ್ತವೆ.

**ನಗರ**

- ನಗರಜೀವನವು ವೈವಿಧ್ಯಮಯವಾಗಿರುವುದು.

- ಮಾಧ್ಯಮಿಕ ಸಂಬಂಧಗಳು ಕಂಡುಬರುತ್ತವೆ.
- ಕೈಗಾರಿಕೆ ಹಾಗೂ ಸೇವಾವಲಯದ ವೃತ್ತಿಗಳಲ್ಲಿ ತೊಡಗಿರುತ್ತಾರೆ.
- ವ್ಯಕ್ತಿಯೇ ಪ್ರಧಾನ.
- ನಗರದ ಜನ ಪ್ರಗತಿಪರರು.
- ಕಾನೂನು, ಪೋಲಿಸ್ ವ್ಯವಸ್ಥೆ, ನ್ಯಾಯಾಲಯಗಳು ಜನರ ನಡತೆಯನ್ನು ನಿಯಂತ್ರಿಸುತ್ತವೆ.

## 4.4 ಬದಲಾಗುತ್ತಿರುವ ಭಾರತೀಯ ಗ್ರಾಮಗಳು

ಗ್ರಾಮೀಣ ಜನರು ಬಹುಬೇಗನೆ ಹೊಸತನಕ್ಕೆ ತೆರೆದುಕೊಳ್ಳುವುದಿಲ್ಲ. ಅವರು ಹೊಂದಾಣಿಕೆಯ ಜೀವನವನ್ನು ಬಯಸುವವರು. ಸಹಜತೆಗೆ ಇಲ್ಲಿ ಅವಕಾಶ. ಆದರೆ ಇತ್ತೀಚೆಗೆ ಗ್ರಾಮಗಳಲ್ಲೂ ಬದಲಾವಣೆಯ ಗಾಳಿ ಬೀಸುತ್ತಿದೆ. ಇದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ಹೇಳಬಹುದು.

1. ಶಿಕ್ಷಣದ ಲಭ್ಯತೆ.
2. ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣಗಾತ್ರದ ಕೈಗಾರಿಕೆಗಳ ಪ್ರಾರಂಭ.
3. ಸರ್ಕಾರದ ಅಭಿವೃದ್ಧಿ ಯೋಜನೆಗಳು. ಉದಾಹರಣೆಗೆ ಪ್ರಧಾನ ಮಂತ್ರಿ ಗ್ರಾಮೀಣ ಸಡಕ್ ಯೋಜನೆ, ಕೂಲಿಗಾಗಿ ಕಾಳು ಯೋಜನೆ, ಇಂದಿರಾ ಆವಾಸ ಯೋಜನೆ ಇತ್ಯಾದಿ
4. ಸಮೂಹ ಮಾಧ್ಯಮಗಳ ಪ್ರಭಾವ.
5. ಸಾರಿಗೆ-ಸಂಪರ್ಕ ವ್ಯವಸ್ಥೆ.
6. ವೈದ್ಯಕೀಯ ಸೌಲಭ್ಯಗಳು.
7. ಅಧಿಕಾರ ವಿಕೇಂದ್ರೀಕರಣ.

**ನಿಮಗಿದು ತಿಳಿದಿರಲಿ:**

ಗ್ರಾಮೀಣ ಪ್ರದೇಶಗಳಿಗೆ ನಗರದ ಸೌಲಭ್ಯಗಳನ್ನು ಒದಗಿಸುವ PURA (Providing Urban Amenities in Rural Area) ಎಂಬ ಯೋಜನೆಯನ್ನು ಮಾಜಿ ರಾಷ್ಟ್ರಪತಿ ಡಾ.

ಅಬ್ದುಲ್ ಕಲಾಂರವರು ರೂಪಿಸಿದ್ದಾರೆ.

**ನಿಮಗಿದು ತಿಳಿದಿರಲಿ:**

ಆಡಳಿತದಲ್ಲಿ ಗ್ರಾಮೀಣ ಜನರೇ ನೇರವಾಗಿ ಭಾಗವಹಿಸಿ ಪ್ರಜಾಪ್ರಭುತ್ವವನ್ನು ಸದೃಢಗೊಳಿಸಬೇಕೆಂಬ ಉದ್ದೇಶದಿಂದ 10 ನೇ ಮೇ, 1993 ರಂದು ಕರ್ನಾಟಕ ಸರ್ಕಾರವು "ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993" ಎಂಬ ಶಾಸನವನ್ನು ಜಾರಿಗೆ ತಂದಿತು. ಈ ಕಾನೂನಿನ ಅನ್ವಯ ಮೂರು ಹಂತದ ಪಂಚಾಯತ್ ರಾಜ್ ಸಂಸ್ಥೆಗಳು ಜಾರಿಗೆ ಬಂದವು.

a. ಗ್ರಾಮ ಮಟ್ಟದಲ್ಲಿ- ಗ್ರಾಮ ಪಂಚಾಯತಿ.

b. ತಾಲೂಕು ಮಟ್ಟದಲ್ಲಿ- ತಾಲ್ಲೂಕು ಪಂಚಾಯಿತಿ.

c. ಜಿಲ್ಲಾ ಮಟ್ಟದಲ್ಲಿ- ಜಿಲ್ಲಾ ಪಂಚಾಯಿತಿ.

ಕೈಗಾರಿಕಾ ಕ್ರಾಂತಿಯಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಗಮನಾರ್ಹ ಬದಲಾವಣೆಗಳು ಕಂಡುಬರುತ್ತಿವೆ.

## 4.5 ಗ್ರಾಮೀಣ ಸಮಸ್ಯೆಗಳು

ಗ್ರಾಮಗಳು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿವೆ. ಅವುಗಳು ಯಾವುವೆಂದು ತಿಳಿಯೋಣ.

**1. ಬಡತನ:**

ಜನಸಂಖ್ಯೆ ಏರಿಕೆ ಗ್ರಾಮಗಳಲ್ಲಿ ಜಮೀನು ವಿಭಜನೆಗೆ ಕಾರಣವಾಗುತ್ತಿದೆ. ಆದ್ದರಿಂದ ಉತ್ಪಾದನೆ ಕುಂಠಿತಗೊಂಡು ಬಡತನ ತಲೆ ಎತ್ತಿದೆ. ಸಾಂಪ್ರದಾಯಕ ಬೇಸಾಯ ಪದ್ಧತಿ, ನಿರುದ್ಯೋಗ, ಮಳೆಯ ಅಭಾವ, ನೀರಾವರಿ ಸೌಕರ್ಯಗಳ ಕೊರತೆ, ಗ್ರಾಮೀಣ ಬಡತನವನ್ನು ಹೆಚ್ಚಿಸಿವೆ. ಹೀಗಾಗಿ ಶೇಕಡ 40 ಕ್ಕಿಂತಲೂ ಅಧಿಕ ಗ್ರಾಮೀಣ ಜನರು ಬಡತನ ರೇಖೆಗಿಂತಲೂ ಕೆಳಮಟ್ಟದ ಜೀವನ ನಡೆಸುತ್ತಾರೆ. ಆದ್ದರಿಂದ ಸರ್ಕಾರ ಸಮಗ್ರ ಗ್ರಾಮಿಣ ಅಭಿವೃದ್ಧಿ ಕಾರ್ಯಕ್ರಮ, ಸ್ವಯಂ ಉದ್ಯೋಗ ಕೈಗೊಳ್ಳಲು ಗ್ರಾಮೀಣ ಯುವ ಜನರಿಗೆ ತರಬೇತಿ, ಗ್ರಾಮೀಣ ಕೈಗಾರಿಕೆಗಳಿಗೆ ಉತ್ತೇಜನ, ಸ್ವ-ಸಹಾಯ ಗುಂಪುಗಳು ಮೊದಲಾದ ಪರಿಣಾಮಕಾರಿ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ.

**2. ಅನಕ್ಷರತೆ:**

ಅನಕ್ಷರತೆಯು ಭಾರತೀಯ ಗ್ರಾಮಗಳ ಒಂದು ಪ್ರಮುಖ ಸಮಸ್ಯೆಯಾಗಿದೆ. ಸರ್ಕಾರ ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಎಷ್ಟೇ ಶ್ರಮಿಸುತ್ತಿದ್ದರೂ ಸಾಧ್ಯವಾಗಿಲ್ಲ. ಏಕೆಂದರೆ

ಶಾಲೆಗಳು, ಶಿಕ್ಷಕರ, ಕೆಲವು ಪೋಷಕರ ಅಸಹಕಾರ, ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ಶಿಕ್ಷಣ ಪ್ರಸಾರಕ್ಕೆ ತೊಂದರೆಯಾಗುತ್ತಿದೆ. 2011 ರ ಜನಗಣತಿಯ ಪ್ರಕಾರ ಶೇ. 64 ರಷ್ಟು ಗ್ರಾಮೀಣ ಜನ ಅನಕ್ಷರಸ್ಥರಾಗಿದ್ದಾರೆ. ಭಾರತ ಸರ್ಕಾರವು ಸಾಕ್ಷರ ಭಾರತ, ಸರ್ವಶಿಕ್ಷಣ ಅಭಿಯಾನ, ಶಿಕ್ಷಣ ಹಕ್ಕು ಕಾಯಿದೆ ಮುಂತಾದ ಕಾರ್ಯಕ್ರಮಗಳ ಮೂಲಕ ಶಿಕ್ಷಣ ಪ್ರಸಾರಕ್ಕೆ ಶ್ರಮಿಸುತ್ತಿದೆ.

### 3. ನಾಗರಿಕ ಸೌಲಭ್ಯಗಳ ಕೊರತೆ:

ಗ್ರಾಮಗಳಲ್ಲಿ ಬೇಕಾದ ಸಾರಿಗೆ ಮತ್ತು ಸಂಪರ್ಕ ಸಾಧನಗಳು, ವೈದ್ಯಕೀಯ, ಮನೋರಂಜನೆ, ಕ್ರೀಡೆ, ವಾಚನಾಲಯ, ಶುದ್ಧ ಕುಡಿಯುವ ನೀರು, ವಸತಿ, ಬೀದಿ ದೀಪ, ಉತ್ತಮ ಚರಂಡಿ ವ್ಯವಸ್ಥೆ, ಶೌಚಾಲಯ ಇತ್ಯಾದಿ ಸೌಲಭ್ಯಗಳ ಕೊರತೆ ಎದ್ದು ಕಾಣುತ್ತದೆ. ಇಂದಿಗೂ ಕೆಲವು ಹಳ್ಳಿಗಳಲ್ಲಿ ರಸ್ತೆ ಬದಿ ಮಲವಿಸರ್ಜನೆ ಮಾಡುವುದನ್ನು ಕಾಣುತ್ತೇವೆ. ಇದರಿಂದ ಮುಜುಗರ ಪಡುವಂತಾಗುತ್ತದೆ. ಅಲ್ಲದೇ ಬಯಲು ಮಲ ವಿಸರ್ಜನೆ ಅನಾರೋಗ್ಯಕ್ಕೆ ಕಾರಣವಾಗುತ್ತದೆ. ಇದನ್ನು ತಡೆಗಟ್ಟಲು ಸರ್ಕಾರ ಸ್ವಚ್ಛ ಭಾರತ್ ಮಿಷನ್ ಯೋಜನೆಯನ್ನು ಜಾರಿಗೆ ತಂದಿದೆ.

### 4. ಗ್ರಾಮಾಡಳಿತದ ಕೊರತೆ:

ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದು ಅಧಿಕಾರ ವಿಕೇಂದ್ರೀಕರಣವಾಗಿದೆ. ಆದರೂ ಗ್ರಾಮಾಡಳಿತವು ಸಮರ್ಥವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಉದಾಹರಣೆಗೆ ಇಂದಿಗೂ ಹಳ್ಳಿಗಳಲ್ಲಿ ಚರಂಡಿ ವ್ಯವಸ್ಥೆ, ಬೀದಿ ದೀಪ, ಗ್ರಾಮೀಣ ನೈರ್ಮಲ್ಯ, ಇತ್ಯಾದಿ ಸೌಲಭ್ಯಗಳ ಕೊರತೆಯಿದೆ. ಕೈಗೆತ್ತಿಕೊಂಡ ಹೊಸ ಯೋಜನೆಗಳು ಸಮರ್ಪಕವಾಗಿ ಅನುಷ್ಠಾನಗೊಳ್ಳದೇ ಇರಲು ಭ್ರಷ್ಟಾಚಾರ, ಸ್ವಜನಪಕ್ಷಪಾತಗಳು ಕಾರಣವಾಗಿವೆ. ರಾಜಕೀಯ ಪ್ರವೇಶದಿಂದಾಗಿ ಹಳ್ಳಿಗಳೂ ಸಾಮರಸ್ಯ, ಸೌಹಾರ್ದತೆಯಿಂದ ದೂರವಾಗುತ್ತಿವೆ. ಈ ಎಲ್ಲ ಕಾರಣಗಳಿಂದಾಗಿ ಗ್ರಾಮೀಣ ಜನರಿಗೆ ಸಿಗಬೇಕಾದ ಮೂಲಭೂತ ಸೌಲಭ್ಯಗಳು ಮರೀಚಿಕೆಯಾಗಿವೆ.

### 5. ಸಾಮಾಜಿಕ ಸಮಸ್ಯೆಗಳು:

ಅಜ್ಞಾನ, ಅನಕ್ಷರತೆ, ಬಡತನಗಳ ಜೊತೆಗೆ ಧೂಮಪಾನ, ಮದ್ಯಪಾನ, ಜೂಜುಗಾರಿಕೆ, ವ್ಯಭಿಚಾರ, ಸೋಮಾರಿತನ, ಅಸ್ಪೃಶ್ಯತೆ ಇತ್ಯಾದಿ ಸಮಸ್ಯೆಗಳು ವ್ಯಾಪಕವಾಗಿವೆ. ಜಾತೀಯತೆ ಮತ್ತು ಅಸ್ಪೃಶ್ಯತೆ ಗ್ರಾಮೀಣ ಜನರನ್ನು ಇಂದಿಗೂ ಕಾಡುತ್ತಿರುವ ಸಮಸ್ಯೆಗಳಾಗಿವೆ.

ಒಂದು ನಿರ್ದಿಷ್ಟ ಜಾತಿಗೆ ತೋರುವ ಪಕ್ಷಪಾತದ ನಿಷ್ಠೆಯನ್ನು ಜಾತೀಯತೆ ಎನ್ನುತ್ತೇವೆ. ತನ್ನ ಜಾತಿ, ಉಪಜಾತಿಗೆ ಸೇರಿದ ಜನರಿಗೆ ತೋರುವಷ್ಟು ಪ್ರೀತಿ, ಗೌರವವನ್ನು ಇತರ ಜಾತಿಯವರಿಗೆ ತೋರುವುದಿಲ್ಲ. ಶ್ರೇಷ್ಠ-ಕನಿಷ್ಠ, ಉಚ್ಚ-ನೀಚ, ಮೇಲು-ಕೀಳು, ಮಡಿ-ಮೈಲಿಗೆ ಮುಂತಾದ ತಾರತಮ್ಯ ಆಧಾರಿತ ಮನೋಭಾವನೆಯೇ ಅಸ್ಪೃಶ್ಯತೆ. ಮಹಾತ್ಮಾ,

ಗಾಂಧೀಯವರು 'ಅಸ್ಪೃಶ್ಯತೆಯು ಆಚರಣೆ ಹಿಂದೂ ಧರ್ಮಕ್ಕೆ ಅಂಟಿದ ಕಳಂಕ' ಎಂದು ಹೇಳಿದ್ದಾರೆ. ಅನೇಕ ಮಹಾಪುರುಷರು, ಸಮಾಜ ಸುಧಾರಕರು, ಸಾಧು-ಸಂತರು, ಸಂಘ-ಸಂಸ್ಥೆಗಳು, ಅಸ್ಪೃಶ್ಯತೆಯ ನಿವಾರಣೆಗೆ ಶ್ರಮಿಸಿದ್ದಾರೆ. ಶತಮಾನಗಳಿಂದಲೂ ಶೋಷಣೆಗೆ ಗುರಿಯಾಗಿದ್ದ ಇವರು ಇತರರಿಗೆ ಸರಿ ಸಮನಾಗಿ ನಿಲ್ಲಲು ಅನುಕೂಲವಾಗುವಂತೆ ಆರ್ಥಿಕ, ಆರೋಗ್ಯ, ವಸತಿ, ಶೈಕ್ಷಣಿಕ ಸೌಲಭ್ಯಗಳನ್ನು ನೀಡಲಾಗುತ್ತಿದೆ.

ಈ ಎಲ್ಲ ಸಮಸ್ಯೆಗಳಿಂದ ಗ್ರಾಮಗಳನ್ನು ಮುಕ್ತಗೊಳಿಸಬೇಕಾಗಿದೆ. ಗ್ರಾಮಗಳು ಸುಧಾರಣೆಯಾದರೆ ಮಾತ್ರ ದೇಶ ಸುಧಾರಣೆಯಾದಂತೆ. ಆದ್ದರಿಂದ ರಸ್ತೆ, ಸಾರಿಗೆ, ನೀರು ಸರಬರಾಜು, ಶಿಕ್ಷಣಸೌಲಭ್ಯ, ಬೀದಿ ದೀಪ, ವಾಚನಾಲಯ, ಸ್ವಚ್ಛತೆ ಮತ್ತು ನಿರ್ಮಲೀಕರಣ, ಗೃಹನಿರ್ಮಾಣ, ಆರೋಗ್ಯ ಕಾರ್ಯಕ್ರಮಗಳು, ಮಹಿಳೆ ಮತ್ತು ಮಕ್ಕಳ ಕಲ್ಯಾಣ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ವರ್ಗಗಳ ಏಳಿಗೆ ಸಂಬಂಧಿತ ಕಾರ್ಯಕ್ರಮಗಳನ್ನು ಕೈಗೊಂಡು ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿ ಸ್ವಾವಲಂಬಿ ಜೀವನ ಸಾಧಿಸುವುದರ ಜೊತೆಗೆ ದೇಶದ ಅಭಿವೃದ್ಧಿಯನ್ನು ಸಾಧಿಸಬಹುದಾಗಿದೆ.

## 4.6 ರೈತರ ಆತ್ಮಹತ್ಯೆ

ಅಂಕಲಗಿ ಬೆಳಗಾವಿ ಜಿಲ್ಲೆ ಗೋಕಾಕ್ ತಾಲ್ಲೂಕಿನ ಒಂದು ಗ್ರಾಮ. ಅಲ್ಲಿ ಚಂದಪ್ಪ ಎಂಬ ರೈತ ವಾಸವಾಗಿದ್ದನು. ಅವನಿಗೆ ತಂದೆಯಿಂದ ಬಳುವಳಿಯಾಗಿ ಬಂದ ಎರಡು ಎಕರೆ ಜಮೀನು ಇತ್ತು. ಕಳೆದ ಎರಡು ವರ್ಷಗಳಿಂದ ಸರಿಯಾಗಿ ಮಳೆಯಾಗದೆ ಕೃಷಿಯಲ್ಲಿ ನಷ್ಟವನ್ನು ಅನುಭವಿಸಿದ್ದನು. ಆದ್ದರಿಂದ ಕೊಳವೆ ಬಾವಿ ಕೊರೆಸಲು ನಿರ್ಧರಿಸಿದನು. ಈಗಾಗಲೇ ಕೃಷಿಗಾಗಿ ಹಾಗೂ ಮಗಳ ಮದುವೆಗಾಗಿ ಬ್ಯಾಂಕಿನಲ್ಲಿ ಮೂರು ಲಕ್ಷ ರೂಪಾಯಿ ಸಾಲ ಮಾಡಿಕೊಂಡಿದ್ದ. ಹಾಗಾಗಿ ಅಂಕಲಗಿಯ ಲೇವಾದೇವಿಗಾರರಾದ ಸಾಹುಕಾರ ಸಿದ್ದಪ್ಪನವರ ಬಳಿ ಒಂದು ಲಕ್ಷ ರೂಪಾಯಿ ಸಾಲ ಪಡೆದು ಕೊಳವೆ ಬಾವಿ ಕೊರೆಸಿದ. ಕೊಳವೆ ಬಾವಿಗೆ ನೀರು ಕಡಿಮೆ ಬಂದಿದ್ದರಿಂದ ಒಂದು ಎಕರೆಗೆ ಮಾತ್ರ ಕಬ್ಬು ನಾಟಿ ಮಾಡಿ ಉಳಿದ ಭೂಮಿಯನ್ನು ವ್ಯವಸಾಯ ಮಾಡದೇ ಹಾಗೆ ಉಳಿಸಿದ. ಕಬ್ಬು ಬೆಳೆದು ಕಟಾವಿಗೆ ಬಂದಿತು. ಆದರೆ ಸಕ್ಕರೆ ಕಾರ್ಖಾನೆಗಳು ಕಬ್ಬಿಗೆ ಕಡಿಮೆ ದರ ನಿಗದಿ ಮಾಡಿದ್ದರಿಂದ ಕಬ್ಬು ಕಟಾವು ಮಾಡಲಿಲ್ಲ. ಕಬ್ಬು ಒಣಗುತ್ತಾ ಬಂತು. ಸಾಹುಕಾರ ಸಿದ್ದಪ್ಪನವರ ಸಾಲ ಬಡ್ಡಿ, ಚಕ್ರಬಡ್ಡಿ ಸೇರಿ ಬೃಹತ್ ಗಾತ್ರದ ಸಾಲವಾಗಿ ಪರಿಣಮಿಸುತ್ತದೆ. ಸಾಲ ಮರುಪಾವತಿಸುವಂತೆ ಕೋರಿ ಬ್ಯಾಂಕ್‌ನಿಂದ ಪದೇ ಪದೇ ನೋಟಿಸ್ ಬರತೊಡಗಿದವು. ಗಾಯದ ಮೇಲೆ ಬರೆ ಎಳೆದಂತೆ ವರದಕ್ಷಿಣೆಗಾಗಿ ಅಳಿಯ ಪೀಡಿಸುತ್ತಿದ್ದಾನೆಂದು ಮಗಳು ತವರು ಮನೆ ಸೇರಿದಳು. ಇದರಿಂದ ಕುಗ್ಗಿ ಹೋದ ಚಂದಪ್ಪ ಆತ್ಮ ಹತ್ಯೆಗೆ ಶರಣಾದ. ಚಂದಪ್ಪನ ಆತ್ಮಹತ್ಯೆಗೆ ಕಾರಣರಾರು?

**ನಿಮಗಿದು ತಿಳಿದಿರಲಿ:**

2012 ರಲ್ಲಿ ಭಾರತದಲ್ಲಿ ದಾಖಲಾದ 13,755 ರೈತರ ಆತ್ಮಹತ್ಯೆಪ್ರಕರಣಗಳಲ್ಲಿ 10,486 (76%) ರಷ್ಟು ಪ್ರಕರಣಗಳು ಮಹಾರಾಷ್ಟ್ರ, ಅವಿಭಜಿತ ಆಂಧ್ರಪ್ರದೇಶ, ಕರ್ನಾಟಕ, ಮಧ್ಯಪ್ರದೇಶ ಹಾಗೂ ಕೇರಳ ರಾಜ್ಯಗಳಲ್ಲಿ ನಡೆದಿವೆ.

ಮಕ್ಕಳೇ, ನಿಮಗೆ ಗೊತ್ತಿರುವಂತೆ ಭಾರತ ಹಳ್ಳಿಗಳ ದೇಶ. ಹಳ್ಳಿಗರ ಪ್ರಮುಖ ಉದ್ಯೋಗ ಕೃಷಿ. ದೇಶದ ಬೆನ್ನೆಲುಬು ಎಂದು ಕರೆಸಿಕೊಳ್ಳುವ ರೈತನನ್ನು 'ಅನ್ನದಾತ' ಎಂದೇ ಗೌರವಿಸುತ್ತೇವೆ. ಆದರೆ ನಮಗೆಲ್ಲ ಅನ್ನ ನೀಡುವ ರೈತನಿಂದು ಆತ್ಮಹತ್ಯೆಗೆ ಶರಣಾಗುತ್ತಿದ್ದಾನೆ. ರೈತನ ಆತ್ಮಹತ್ಯೆಯನ್ನು ತಡೆಯಲು ವಿಫಲಾಗಿರುವುದು ನಾಗರಿಕ ಸಮಾಜಕ್ಕೆ ನಾಚಿಕೆಗೇಡಿನ ವಿಷಯವಾಗಿದೆ. ರೈತರ ಆತ್ಮಹತ್ಯೆ ಜಾಗತಿಕ ವಿದ್ಯಮಾನವಾಗಿದೆ. ಶ್ರೀಲಂಕಾ, ಅಮೇರಿಕ ಸಂಯುಕ್ತ ಸಂಸ್ಥಾನ, ಕೆನಡ, ಇಂಗ್ಲಂಡ್ ಮತ್ತು ಆಸ್ಟ್ರೇಲಿಯಾಗಳಲ್ಲೂ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಈ ದೇಶಗಳಲ್ಲಿ ಕೈಗಾರಿಕಾ ಕಾರ್ಮಿಕರಿಗಿಂತಲೂ ರೈತರ ಆತ್ಮಹತ್ಯೆಯ ಪ್ರಮಾಣ ಹೆಚ್ಚಾಗಿರುವುದು ಕಂಡುಬಂದಿದೆ. ಆದರೆ ಭಾರತದಲ್ಲಿ ನಡೆಯುತ್ತಿರುವ ರೈತರ ಆತ್ಮಹತ್ಯೆಗಳು ವೇಗವಾಗಿ ಬೆಳೆಯುತ್ತಿರುವ ಆರ್ಥಿಕತೆಗೆ ಹಿನ್ನಡೆಯಾಗಿವೆ. ಉತ್ತರ ಭಾರತಕ್ಕಿಂತ 10 ಪಟ್ಟು ಹೆಚ್ಚು ರೈತರ ಆತ್ಮಹತ್ಯೆಪ್ರಕರಣಗಳು ದಕ್ಷಿಣ ಭಾರತದಲ್ಲಿ ಕಂಡು ಬರುತ್ತವೆ. ಹಾಗಾದರೆ ಆತ್ಮಹತ್ಯೆ ಎಂದರೇನು?

ಒಬ್ಬ ವ್ಯಕ್ತಿಯು ಉದ್ದೇಶಪೂರ್ವಕವಾಗಿ ತನ್ನ ಜೀವವನ್ನು ತಾನೇ ಕಳೆದುಕೊಳ್ಳುವುದನ್ನು ಆತ್ಮಹತ್ಯೆ ಎಂದು ಕರೆಯುತ್ತೇವೆ. ಜೀವನದ ಒತ್ತಡಗಳನ್ನು, ಸಮಸ್ಯೆಗಳನ್ನು ಎದುರಿಸಲು ಸಾಧ್ಯವಾಗದ ಸ್ಥಿತಿಯುಂಟಾದಾಗ ಮನುಷ್ಯ ಆತ್ಮಹತ್ಯೆಗೆ ಶರಣಾಗುತ್ತಾನೆ. ಯಾವುದೇ ಸಮಾಜವು ಆತ್ಮಹತ್ಯೆಯನ್ನು ಬೆಂಬಲಿಸುವುದಿಲ್ಲ. ಅದನ್ನು ಮಾಹಾಪರಾಧ ಎಂದು ಭಾವಿಸುತ್ತದೆ. 2012 ರಲ್ಲಿ ಜರುಗಿದ ಒಟ್ಟು 1,35,445 ಆತ್ಮಹತ್ಯೆ ಪ್ರಕರಣಗಳಲ್ಲಿ 13,755 ಪ್ರಕರಣಗಳು ರೈತರ ಆತ್ಮಹತ್ಯೆಯಾಗಿವೆ. ಹಾಗಾದರೆ ರೈತರೇಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ?

## *ರೈತರ ಆತ್ಮಹತ್ಯೆಗೆ ಕಾರಣಗಳು:*

### 1. ಬಡತನ:

ಭಾರತದ ರೈತರು ಬಡವರು. ಜನಸಂಖ್ಯಾ ಏರಿಕೆಯಿಂದ ಅವರ ಪಾಲಿಗೆ ಬಂದಿರುವ ಭೂಮಿಯು ತುಂಡು ಭೂಮಿಯಾಗಿದ್ದು ಇದರಲ್ಲಿ ವೈಜ್ಞಾನಿಕ ಬೇಸಾಯ ಪದ್ಧತಿಯನ್ನು ಅಳವಡಿಸಲು ಸಾಧ್ಯವಾಗುವುದಿಲ್ಲ. ಬಡವನಾದ್ದರಿಂದ ಸುಧಾರಿತ ತಳಿಯ ಬೀಜ, ರಸಗೊಬ್ಬರ, ಕ್ರಿಮಿನಾಶಕಗಳನ್ನು ಬಳಕೆ ಮಾಡಲಾಗದೇ ಉತ್ತಮ ಬೆಳೆ ಪಡೆಯಲು ಆಗುವುದಿಲ್ಲ. ಇದು ಆತ್ಮಹತ್ಯೆಗೆ ಕಾರಣವಾಗುತ್ತದೆ.

### ನಿಮಗಿದು ತಿಳಿದಿರಲಿ:

ದಕಿಣ ಕನ್ನಡ ಜಿಲ್ಲೆಯ ಪುತ್ತೂರು, ಉಪ್ಪಿನಂಗಡಿ, ನೆಲ್ಲಾಡಿಯಲ್ಲಿ ಆಫ್ರಿಕನ್ ದೇಶದ ಜೈಂಟ್ ಸ್ನೇಲ್ ಎಂಬ ದೈತ್ಯ ಹುಳು ಪತ್ತೆಯಾಗಿದೆ. ಇದು ತೆಂಗಿನಮರ, ಕಾಳುಮೆಣಸು, ಅಡಕೆ ಮರ, ಬಾಳೆ ಸೇರಿದಂತೆ ಹಸಿರು ತರಕಾರಿ ಗಿಡಗಳನ್ನು ತಿಂದು ಹಾಕುತ್ತದೆ. 10 ರಿಂದ 12 ವರ್ಷ ಬದುಕುವ ಇದು 500 ಸಸ್ಯ ಪ್ರಬೇಧಗಳನ್ನು ತಿನ್ನತ್ತದೆ. ಈ ಕೀಟಬಾಧೆ ಕರಾವಳಿ ಭಾಗದ ರೈತರನ್ನು ಕಂಗೆಡಿಸಿದೆ.

**2. ಬೆಳೆ ವೈಫಲ್ಯ:**

ಭಾರತದಲ್ಲಿ ನಡೆಯುವ ಆತ್ಮಹತ್ಯೆಗಳಿಗೆ ಪ್ರವಾಹ, ಬರಗಾಲ, ಅತಿವೃಷ್ಟಿ ಹಾಗೂ ಅನಾವೃಷ್ಟಿಗಳು ಪ್ರಮುಖ ಕಾರಣವಾಗಿವೆ. ಮಾನ್ಸೂನ್ ಮಾರುತಗಳು ಭಾರತದ ವ್ಯವಸಾಯವನ್ನು ನಿಯಂತ್ರಿಸುತ್ತವೆ. ಇವು ಅನಿಯಮಿತ, ಅನಿಶ್ಚಿತ ಹಾಗೂ ಅಕಾಲಿಕವಾಗಿವೆ. ಒಂದೊಮ್ಮೆ ಅತಿವೃಷ್ಟಿಯಾಗಿ ಅಪಾರ ಹಾನಿಯುಂಟು ಮಾಡುತ್ತವೆ. ಮತ್ತೊಮ್ಮೆ ಹನಿ ಮಳೆಯೂ ಇಲ್ಲದೇ ಬರಗಾಲಕ್ಕೆ ಕಾರಣವಾಗುತ್ತವೆ. ಪ್ರವಾಹ, ಅತಿವೃಷ್ಟಿ ಹಾಗೂ ಅನಾವೃಷ್ಟಿಯಿಂದ ಆಗುವ ಬೆಳೆ ವೈಫಲ್ಯದಿಂದ ಶೇ. 16.81 ರಷ್ಟು ಆತ್ಮಹತ್ಯೆಗಳು 2012 ರಲ್ಲಿ ನಡೆದವು. ಭಾರತದ ಕೃಷಿ ಭೂಮಿಯ ಶೇ 79.5 ರಷ್ಟು ಭೂಮಿ ಪ್ರವಾಹ ಪೀಡಿತ ಪ್ರದೇಶಗಳಲ್ಲಿದೆ. ಸಾಲ-ಸೋಲ ಮಾಡಿ ಬೆಳೆದ ಬೆಳೆ ಕೈಗೆ ಸಿಗುವುದಿಲ್ಲ. ಆತನ ದನ-ಕರುಗಳಿಗೆ ಮೇವು ಸಹ ಸಿಗದಂತಾದಾಗ ರೈತ ಹತಾಶೆಗೊಳಗಾಗಿ ಆತ್ಮಹತ್ಯೆಗೆ ಶರಣಾಗುತ್ತಾನೆ.

**3. ಗ್ರಾಮೀಣ ಸಾಲ:**

'ಭಾರತದ ರೈತರು ಸಾಲದಲ್ಲಿಯೇ ಹುಟ್ಟಿ ಸಾಲದಲ್ಲಿಯೇ ಬೆಳೆದು, ಸಾಲದಲ್ಲಿಯೇ ಸಾಯುತ್ತಾರೆ' ಎಂಬ ಮಾತಿದೆ. ಭಾರತದ ರೈತನು ಬಡವನಾದ್ದರಿಂದ ಅವನಿಗೆ ಇರುವ ಆದಾಯ ಕಡಿಮೆ. ಮನೆಯಲ್ಲಿ ನಡೆಯುವ ನಾಮಕರಣ, ವಿವಾಹ, ಹಬ್ಬ- ಹರಿದಿನ, ಜಾತ್ರೆ-ಉತ್ಸವ ಮುಂತಾದವುಗಳಿಗಾಗಿ ಹೆಚ್ಚು ಹಣ ಖರ್ಚಾಗುತ್ತದೆ. ಇದಕ್ಕಾಗಿ ಆತ ಸಾಲ ಮಾಡುತ್ತಾನೆ. ವ್ಯವಸಾಯಕ್ಕಾಗಿಯೂ ಸಾಲ ಮಾಡಿ, ಉತ್ತಿ-ಬಿತ್ತಿ ಬೆಳೆಗಾಗಿ ಕಾಯುತ್ತಾನೆ. ಹಳ್ಳಿಗಳಲ್ಲಿ ಲೇವಾದೇವಿಗಾರರು ನೀಡುವ ಸಾಲಕ್ಕೆ ಬಡ್ಡಿಯ ಪ್ರಮಾಣ ವಾರ್ಷಿಕ ಶೇ. 60. ಸಾಲಕ್ಕೆ ಬಡ್ಡಿ, ಚಕ್ರಬಡ್ಡಿ ಸೇರುತ್ತದೆ. ಆದರೆ ಬೆಳೆ ವಿಫಲವಾದಾಗ ಸಾಲ ತೀರಿಸಲಾಗದೇ ಜೀವ ಕಳೆದುಕೊಳ್ಳುತ್ತಾನೆ.

**4. ಹೊಸ ಆರ್ಥಿಕ ನೀತಿ:**

ಅರ್ಥಶಾಸ್ತ್ರಜ್ಞರಾದ ಪ್ರಭಾತ್ ಪಟ್ನಾಯಿಕ ಹಾಗೂ ಜಯತಿ ಘೋಷ್ ಅವರು ಹೊಸ ಆರ್ಥಿಕ ನೀತಿಯ ಫಲವಾಗಿ ದೇಶದಲ್ಲಿ ಕಂಡುಬಂದ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಗಳು ರೈತರ ಆತ್ಮಹತ್ಯೆಗೆ ಪ್ರಮುಖ ಕಾರಣವಾಗಿವೆ ಎಂದು ಅಭಿಪ್ರಾಯ ಪಡುತ್ತಾರೆ.

**5. ದೋಷಪೂರ್ಣ ಮಾರುಕಟ್ಟೆ:**

ದೋಷಪೂರ್ಣ ಮಾರುಕಟ್ಟೆಗಳು ರೈತರ ಆತ್ಮಹತ್ಯೆಗೆ ಕಾರಣವಾಗಿವೆ. ರೈತರ ಬೆಳೆಗಳಿಗೆ ಸಕಾಲದಲ್ಲಿ ಯೋಗ್ಯ ಬೆಲೆ ದೊರೆತಾಗ ಅವರ ಏಳಿಗೆ ಆಗುತ್ತದೆ. ಆದರೆ ಅವರಿಗೆ ಸಕಾಲದಲ್ಲಿ ಬೆಲೆ ದೊರೆಯುವುದಿಲ್ಲ. ಹಾಗೂ ಕೃಷಿ ಉತ್ಪನ್ನಗಳಿಗೆ ನ್ಯಾಯವಾದ ಬೆಲೆ ಸಿಗುವುದಿಲ್ಲ. ಕಷ್ಟಪಟ್ಟು ದುಡಿದ ರೈತನಿಗಿಂತ ಮಧ್ಯವರ್ತಿಗಳೇ ಕೆಲವೇ ಗಂಟೆ ಅಥವಾ ದಿನಗಳಲ್ಲಿ ಹೆಚ್ಚು ಲಾಭ ಗಳಿಸುತ್ತಾರೆ. ಸಾಲ ತೀರಿಸಬೇಕಾದ ಅನಿವಾರ್ಯತೆ ಇರುವುದರಿಂದ ರೈತ ಸಿಕ್ಕಷ್ಟು ಬೆಲೆಗೆ ಉತ್ಪನ್ನಗಳನ್ನು ಮಾರುತ್ತಾನೆ. ಬಂದ ಹಣವೆಲ್ಲ ಸಾಲ ಕೊಟ್ಟವನಿಗೆ ಹೋಗುತ್ತದೆ. ಇತರೆ ಖರ್ಚುಗಳನ್ನು ನಿಭಾಯಿಸಲಾಗದೇ ರೈತ ಆತ್ಮಹತ್ಯೆ ದಾರಿ ಹಿಡಿಯುತ್ತಾನೆ. 2012 ರಲ್ಲಿ ಬೆಲೆ ಕುಸಿತದಿಂದ ಆತ್ಮಹತ್ಯೆಗೆ ಶರಣಾದವರ ಪ್ರಮಾಣ ಶೇ. 2.65 ರಷ್ಟು.

**6. ಸಾಮಾಜಿಕ ಕಾರಣಗಳು:**

2012 ರಲ್ಲಿ ಮೃತರಾದ ರೈತರ ಆತ್ಮಹತ್ಯೆಗೆ ಕಾರಣವಾದ ಸಾಮಾಜಿಕ ಅಂಶಗಳನ್ನು ಹೀಗೆ ಪಟ್ಟಿ ಮಾಡಲಾಗಿದೆ. ಕೌಟುಂಬಿಕ ಕಾರಣಗಳು, ಆರೋಗ್ಯ ಸಮಸ್ಯೆಗಳು, ಹೆಣ್ಣು ಮಕ್ಕಳ ಮದುವೆ, ಆಸ್ತಿ ವಿವಾದ, ಗೃಹ ನಿರ್ಮಾಣಕ್ಕೆ ಮಾಡಿದ ಸಾಲ, ಗ್ರಾಮೀಣ ಋಣಭಾರ, ಬೆಲೆ ಕುಸಿಯುವಿಕೆ, ಕೊಳವೆ ಬಾವಿಗಳ ವೈಫಲ್ಯ ಇತ್ಯಾದಿ.

**7. ಇತರೆ ಕಾರಣಗಳು:**

ಆಧುನಿಕ ಜೈವಿಕ ತಂತ್ರಜ್ಞಾನದಿಂದ ಹುಟ್ಟಿದ ಮಿಶ್ರತಳಿ ಬೀಜಗಳು ದುಬಾರಿಯಾಗಿರುತ್ತವೆ. ಉದಾಹರಣೆ: **BT** ಹತ್ತಿ ಬೀಜಗಳು ಮಾಮೂಲಿ ಬೀಜಗಳ ಎರಡರಷ್ಟು ತುಟ್ಟಿಯಾಗಿರುತ್ತವೆ. ಜೊತೆಗೆ ಕ್ರಿಮಿನಾಶಕ, ರಸಗೊಬ್ಬರ, ತುಂತುರು ನೀರಾವರಿ, ಹನಿ ನೀರಾವರಿಗಾಗಿ ಸಾಲ ಮಾಡಿ ಬೆಳೆದ ಬೆಳೆ ಕೈಗೆಟುಕದೇ ಹೋದಾಗ ಇಲ್ಲವೇ ನಷ್ಟವಾದಾಗ ರೈತ ಆತ್ಮಹತ್ಯೆಯ ಹಾದಿ ತುಳಿಯುತ್ತಾನೆ. 2012 ರಲ್ಲಿ ಕೊಳವೆ ಬಾವಿ ಕೊರೆಯಲು ಮಾಡಿದ ಸಾಲ ತೀರಿಸಲಾಗದೇ ಆತ್ಮಹತ್ಯೆ ಮಾಡಿಕೊಂಡವರ ಸಂಖ್ಯೆ ಶೇ. 0.88 ರಷ್ಟು.

ಅನ್ನದಾತನ ಆತ್ಮಹತ್ಯೆಗೆ ಕಾರಣಗಳೇನೆ ಇದ್ದರೂ ಅದನ್ನು ತಡೆಯುವುದು ಜವಾಬ್ದಾರಿಯುತ ಸರ್ಕಾರದ ಕರ್ತವ್ಯವಾಗಿರುತ್ತದೆ. 2013 ರಲ್ಲಿ ಭಾರತ ಸರ್ಕಾರ ರೈತರಿಗಾಗಿ 912 ದಶಲಕ್ಷ ರೂಪಾಯಿಗಳ ಪ್ಯಾಕೇಜ್ ಘೋಷಿಸಿತು. ಆದರೆ ರೈತನ ಮರಣದ ನಂತರ ಪರಿಹಾರ ಘೋಷಿಸುವುದಕ್ಕಿಂತ ಅತ್ಮಹತ್ಯೆಗೆ ಕಾರಣಗಳನ್ನು ಕಂಡುಹಿಡಿದು, ಅದನ್ನು ಪರಿಹರಿಸುವ ಕೆಲಸವಾಗಬೇಕು. ಅನ್ನದಾತನಿಗೆ ಧೈರ್ಯ ಹೇಳುವ, ಆತ್ಮವಿಶ್ವಾಸ ತುಂಬುವ ಕೆಲಸ ಆಗಬೇಕು. ಜಿಲ್ಲೆ, ತಾಲ್ಲೂಕು, ಹೋಬಳಿಗಳ ಹಂತದಲ್ಲಿ ಅಧಿಕಾರಿಗಳ ನೇಮಕ ಮಾಡಿ ರೈತರಿಗೆ ಎಲ್ಲ ವಿಷಯಗಳಲ್ಲಿ ಸೂಕ್ತ ಮಾರ್ಗದರ್ಶನ ಮಾಡುವ ವ್ಯವಸ್ಥೆ ಆಗಬೇಕು.

## ಸಾರಾಂಶ

1. ವ್ಯವಸಾಯ ಕಲೆಯನ್ನು ಕಲಿತ ಮೇಲೆ ಮಾನವನು ಒಂದೆಡೆ ಸ್ಥಿರವಾಗಿ ನೆಲೆಸಲು ಪ್ರಾರಂಭಿಸಿದ ನೆಲೆಗಳು ಗ್ರಾಮಗಳೆನಿಸಿಕೊಂಡವು.
2. ಕೃಷಿ ಭಾರತದ ಹಳ್ಳಿಗಳ ಮುಖ್ಯ ಉದ್ಯೋಗವಾಗಿದೆ.
3. ಬಹುತೇಕ ಗ್ರಾಮೀಣರು ಸಂಪ್ರದಾಯವಾದಿಗಳಾಗಿರುತ್ತಾರೆ.
4. ಗ್ರಾಮೀಣ ಜೀವನದಲ್ಲಿ ಮುಖಾಮುಖಿ ಸಂಬಂಧವು ಕಂಡುಬರುತ್ತದೆ.
5. ಗ್ರಾಮೀಣ ಪ್ರದೇಶದಲ್ಲಿ ಸಂಪ್ರದಾಯಗಳು, ಪದ್ಧತಿಗಳು, ನಂಬಿಕೆಗಳು, ಮೌಲ್ಯಗಳು ಜನರ ನಡತೆಯನ್ನು ನಿಯಂತ್ರಿಸುತ್ತವೆ.
6. ಅವಿಭಕ್ತ ಕುಟುಂಬ ಎಂದರೆ ಮೂರು, ನಾಲ್ಕು ತಲೆಮಾರಿನ ಜನ ಒಟ್ಟಿಗೆ ವಾಸಿಸುವುದು.
7. ಸಾಂಪ್ರದಾಯಕ ಬೇಸಾಯ ಪದ್ಧತಿ, ನಿರುದ್ಯೋಗ, ಮಳೆಯ ಅಭಾವ ಗ್ರಾಮೀಣ ಬಡತನವನ್ನು ಹೆಚ್ಚಿಸಿವೆ.
8. ಶೇಕಡ 40 ಕ್ಕಿಂತಲೂ ಅಧಿಕ ಗ್ರಾಮೀಣ ಜನರು ಬಡತನ ರೇಖೆಗಿಂತಲೂ ಕೆಳಮಟ್ಟದ ಜೀವನ ನಡೆಸುತ್ತಿದ್ದರೆ, ಶೇ. 64 ರಷ್ಟು ಜನ ಅನಕ್ಷರಸ್ಥರಾಗಿದ್ದಾರೆ.
9. 'ಹಳ್ಳಿಗಳ ಅಭಿವೃದ್ಧಿಯಾಗದೆ ದೇಶದ ಅಭಿವೃದ್ಧಿ ಸಾಧ್ಯವಿಲ್ಲ' ಎಂದು ಗಾಂಧೀಜಿಯವರು ಅಭಿಪ್ರಾಯ ಪಟ್ಟಿದ್ದಾರೆ.
10. ಸರ್ಕಾರ ಸಮಗ್ರ ಗ್ರಾಮಿಣ ಅಭಿವೃದ್ಧಿ ಕಾರ್ಯಕ್ರಮ, ಸ್ವಯಂ ಉದ್ಯೋಗ ಕೈಕೊಳ್ಳಲು ಗ್ರಾಮೀಣ ಯುವ ಜನರಿಗೆ ತರಬೇತಿ, ಗ್ರಾಮೀಣ ಕೈಗಾರಿಕೆಗಳಿಗೆ ಉತ್ತೇಜನ, ಸ್ವ-ಸಹಾಯ ಗುಂಪುಗಳು, ಮೊದಲಾದ ಪರಿಣಾಮಕಾರಿ ಕಾರ್ಯಕ್ರಮಗಳನ್ನು ಜಾರಿಗೆ ತರಲಾಗಿದೆ.
11. ಒಂದು ನಿರ್ಧಿಷ್ಟ ಜಾತಿಗೆ ತೋರುವ ಪಕ್ಷಪಾತದ ನಿಷ್ಠೆಯನ್ನು ಜಾತೀಯತೆ ಎನ್ನುತ್ತೇವೆ.
12. ಶ್ರೇಷ್ಠ-ಕನಿಷ್ಠ, ಉಚ್ಚ-ನೀಚ, ಮೇಲು-ಕೀಳು, ಮಡಿ-ಮೈಲಿಗೆ ಮುಂತಾದ ತಾರತಮ್ಯ ಆಧಾರಿತ ಮನೋಭಾವನೆಯೇ ಅಸ್ಪೃಶ್ಯತೆ.
13. ಹೊಸ ಆರ್ಥಿಕ ನೀತಿಯ ಫಲವಾಗಿ ದೇಶದಲ್ಲಿ ಕಂಡುಬಂದ ಖಾಸಗೀಕರಣ, ಉದಾರೀಕರಣ ಹಾಗೂ ಜಾಗತೀಕರಣಗಳು ರೈತರ ಆತ್ಮಹತ್ಯೆಗೆ ಕಾರಣವಾಗಿವೆ.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ಸೂಕ್ತ ಪದಗಳಿಂದ ತುಂಬಿರಿ.**

1. ಭಾರತ _______ ಗಳ ದೇಶ.
2. ಗ್ರಾಮಗಳಲ್ಲಿ ವ್ಯಕ್ತಿಗಿಂತ _______ ಮುಖ್ಯ.
3. ನಗರದ ಜನರು _______ ಹಾಗೂ _______ ವೃತ್ತಿಗಳಲ್ಲಿ ತೊಡಗಿರುತ್ತಾರೆ.
4. ರೈತನನ್ನು _______ ಎಂದು ಗೌರವಿಸುತ್ತೇವೆ.

**II. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ.**

1. ಕೃಷಿ ಸಂಬಂಧಿತ ಉದ್ಯೋಗಗಳಾವುವು?
2. ಕೂಡು ಕುಟುಂಬ ಎಂದರೇನು?
3. ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆ ಬಂದಿದ್ದರಿಂದ ಆದ ಪರಿಣಾಮವೇನು?
4. ಜಾತೀಯತೆ ಎಂದರೇನು?

**IV. ಈ ಕೆಳಗಿನ ಪ್ರಶ್ನೆಗಳಿಗೆ ಮೂರರಿಂದ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ.**

1. ಹಳ್ಳಿಗಳಲ್ಲಿ ನೆರೆಹೊರೆಯ ಪಾತ್ರವೇನು?
2. ಗ್ರಾಮೀಣ ಬಡತನಕ್ಕೆ ಕಾರಣಗಳನ್ನು ತಿಳಿಸಿ.
3. ಗ್ರಾಮೀಣ ಪ್ರದೇಶಗಳಲ್ಲಿ ಕಂಡುಬರುವ ಸಾಮಾಜಿಕ ಸಮಸ್ಯೆಗಳನ್ನು ಪಟ್ಟಿಮಾಡಿ.
4. ರೈತರ ಆತ್ಮಹತ್ಯೆಗೆ ಕಾರಣವಾಗುವ ಸಾಮಾಜಿಕ ಅಂಶಗಳಾವುವು?

**V. ಈ ಕೆಳಗಿನ ಪ್ರಶ್ನೆಗಳಿಗೆ ಆರರಿಂದ ಎಂಟು ವಾಕ್ಯಗಳಲ್ಲಿ ಉತ್ತರಿಸಿ.**

1. ‘ಗ್ರಾಮಗಳಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ.’ ಈ ಹೇಳಿಕೆಯನ್ನು ಸಮರ್ಥಿಸಿ.
2. ಗ್ರಾಮೀಣ ಜನರು ಎದುರಿಸುತ್ತಿರುವ ಸಮಸ್ಯೆಗಳಾವುವು?
3. ಗ್ರಾಮ ಹಾಗೂ ನಗರಗಳ ನಡುವಿನ ವ್ಯತ್ಯಾಸ ತಿಳಿಸಿ.
4. “ಭಾರತದ ರೈತರು ಸಾಲದಲ್ಲಿಯೇ ಹುಟ್ಟಿ, ಸಾಲದಲ್ಲಿಯೇ ಬೆಳೆದು, ಸಾಲದಲ್ಲಿಯೇ ಸಾಯುತ್ತಾರೆ”. ಈ ಹೇಳಿಕೆಯನ್ನು ಸಮರ್ಥಿಸಿ.

**ಸಲಹಾತ್ಮಕ ಚಟುವಟಿಕೆ:**

ವಾಸಿಸುವ ಪ್ರದೇಶದಲ್ಲಿ ಕಂಡುಬರುವ ಉದ್ಯೋಗಗಳನ್ನು ಪಟ್ಟಿಮಾಡಿ.

ವಾಸಿಸುವ ಪ್ರದೇಶದಲ್ಲಿ ಜನ ಎದುರಿಸುತ್ತಿರುವ ಸಮಸ್ಯೆಗಳನ್ನು ಪಟ್ಟಿ ಮಾಡಿ.

# ಅಧ್ಯಾಯ- 5 ಅಲೆಮಾರಿ ಸಮುದಾಯಗಳು (Nomadic Groups)

**ಕಲಿಕಾಂಶಗಳು:**

1. ಅಲೆಮಾರಿ ಸಮುದಾಯಗಳು ಯಾವುವು ಎಂಬುದನ್ನು ತಿಳಿಯುತ್ತೇವೆ.
2. ಈ ಸಮುದಾಯಗಳ ಲಕ್ಷಣಗಳ ಬಗ್ಗೆ ಗಮನ ಹರಿಸುತ್ತೇವೆ.
3. ಅಲೆಮಾರಿ ಸಮುದಾಯಗಳ ಸಂಸ್ಕೃತಿಯನ್ನು ಪರಿಚಯಿಸಿಕೊಳ್ಳುತ್ತೇವೆ.
4. ಅಲೆಮಾರಿ ಸಮುದಾಯಗಳು ಯಾವ ರೀತಿಯ ಸಮಸ್ಯೆಗಳನ್ನು ಎದುರಿಸುತ್ತಿವೆ ಎಂಬುದನ್ನು ತಿಳಿದು ಚರ್ಚಿಸುತ್ತೇವೆ.
5. ಅಲೆಮಾರಿ ಸಮುದಾಯಗಳಲ್ಲಿ ಇರುವ ಸಂಘಟನೆಗಳ ಬಗ್ಗೆ ಅರಿತುಕೊಳ್ಳುತ್ತೇವೆ.

## 5.1 ಪೀಠಿಕೆ:

ಮಕ್ಕಳೇ ನೀವು ಅಲೆಮಾರಿ ಎಂಬ ಪದವನ್ನು ಕೇಳಿದ್ದೀರಾ? ಇವರು ಖಾಲಿ ನಿವೇಶನಗಳಲ್ಲಿ ಅಥವಾ ರಸ್ತೆ ಪಕ್ಕದಲ್ಲಿ ಗುಡಿಸಲುಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಾರೆ. ಜೀವನ ನಿರ್ವಹಣೆಗಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಬಂದು ಬಿಡಾರ ಹೂಡಿರುತ್ತಾರೆ. ಈ ಸಮುದಾಯಗಳಿಗೆ ಒಂದು ನಿರ್ದಿಷ್ಟ ನೆಲೆ ಇಲ್ಲ. ಇಂದು ಇಲ್ಲಿ, ನಾಳೆ ಅಲ್ಲಿ, ನಾಡಿದ್ದು ಇನ್ನೆಲ್ಲೋ ಎನ್ನುವ ಸ್ಥಿತಿಯಲ್ಲಿ ಅಲೆಮಾರಿ ಕುಟುಂಬಗಳು ಜೀವನೋಪಾಯಕ್ಕಾಗಿ ಪ್ರದೇಶದಿಂದ ಪ್ರದೇಶಕ್ಕೆ ಹೋಗುತ್ತಲೇ ಇರುತ್ತಾರೆ. ಇವರಿಗೆ ಭೂಮಿ, ಊರು, ಕೇರಿ ಎಂಬುದು ಇಲ್ಲ. ದಿನನಿತ್ಯ ಅಲೆಯುವುದೇ ಇವರ ಮೂಲ ಕಸುಬಾಗಿದೆ.



ಭಾರತದಲ್ಲಿ ಸುಮಾರು 10 ಕೋಟಿಗಿಂತಲೂ ಹೆಚ್ಚು ಅಲೆಮಾರಿಗಳಿದ್ದಾರೆ ಎಂದು ಅಂದಾಜಿಸಲಾಗಿದೆ. ದೇಶದ ಎಲ್ಲಾ ರಾಜ್ಯಗಳಲ್ಲಿ ಕಂಡುಬರುತ್ತಾರೆ, ಇವರ ಜನಸಂಖ್ಯೆಯಲ್ಲಿ ಮಹಾರಾಷ್ಟ್ರ ಮೊದಲ ಸ್ಥಾನದಲ್ಲಿದ್ದರೆ ಕರ್ನಾಟಕ ಎರಡನೆಯ ಸ್ಥಾನದಲ್ಲಿದೆ.

## 5.2 ಅಲೆಮಾರಿಗಳು ಎಂದರೆ ಯಾರು?

ಉದ್ಯೋಗ ಮತ್ತು ಜೀವನ ನಿರ್ವಹಣೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವವರೇ ಅಲೆಮಾರಿಗಳು. ಉದಾಹರಣೆಗೆ: ಹೆಳವ, ಜೋಗಿ, ಗಾರೂಡಿ, ವೀರ, ಶಿಳ್ಳೇಕ್ಯಾತ, ಹಂಡಿಜೋಗಿ, ದೊಂಬಿದಾಸ, ಕಟಬು, ಬೆಸ್ತರ್, ಸರೋಡಿ, ಶಿಕ್ಕಲಿಗಾರ, ಬಾಜಿಗರ್ ಮುಂತಾದವು. ಅಲೆಮಾರಿ ಪದವನ್ನು ಭಾಷೆಯ ಆಧಾರಿತವಾಗಿ ತಮಿಳಿನಲ್ಲಿ ಪೊರ್ಕನ್ ತೆಲುಗಿನಲ್ಲಿ ತಿರುಗುಬೋತು, ಮಲೆಯಾಳಂನಲ್ಲಿ ತೆಂಟಿ, ಹಿಂದಿಯಲ್ಲಿ ಸಂಚಾರಿ, ಇಂಗ್ಲೀಷಿನಲ್ಲಿ ನೆಲೆಯಿಲ್ಲದವರು, ನೊಮ್ಯಾಡ್ ಪರಸ್ಥಳದವರು ಎಂಬ ವಿವಿಧ ಹೆಸರುಗಳಿವೆ.

**ನಿಮಗೆ ತಿಳಿದಿರಲಿ:**

ದೇಶದ ಜನಸಂಖ್ಯೆಯನ್ನು ಗುರುತಿಸಲು ಜನಗಣತಿಯನ್ನು 1881 ರಲ್ಲಿ ಆರಂಭಿಸಲಾಯಿತು. ಈ ಜನಗಣತಿಯಲ್ಲಿ 1929 ಜಾತಿ ಬುಡಕಟ್ಟು ಸಮುದಾಯಗಳು ದಾಖಲಾಗಿವೆ.



## 5.3 ಅಲೆಮಾರಿ ಸಮುದಾಯದ ಲಕ್ಷಣಗಳು

1. **ಸಾಮಾನ್ಯವಾಗಿ ಯಾವುದೇ ಒಂದು ಪ್ರದೇಶದಲ್ಲಿ ನೆಲೆಸುವುದಿಲ್ಲ:**

ಅಲೆಮಾರಿ ಸಮುದಾಯಗಳು ಒಂದು ಪ್ರದೇಶದಲ್ಲಿ ವಾಸಿಸುವುದಿಲ್ಲ. ಆಹಾರ ಮತ್ತು ಉದ್ಯೋಗ ಎಲ್ಲಿ ದೊರೆಯುತ್ತದೆಯೋ ಅಲ್ಲಿ ವಾಸಿಸುತ್ತಾರೆ. ಇದಕ್ಕೆ ಮತ್ತೊಂದು ಕಾರಣ ಅವರಿಗೆ ಆಸ್ತಿ ಇಲ್ಲದಿರುವುದು.

2. **ಪ್ರತ್ಯೇಕ ಭಾಷೆ:**

ಅಲೆಮಾರಿ ಸಮುದಾಯವು ಒಂದೊಂದು ಪ್ರತ್ಯೇಕ ಭಾಷೆಯನ್ನು ಮಾತನಾಡುತ್ತಾರೆ. ಈ ಭಾಷೆಗಳು ಸ್ಥಳೀಯ ಭಾಷೆಗಳ ಪ್ರಭಾವವನ್ನು ಹೊಂದಿರುತ್ತವೆ. ಕೆಲವು ಸಾರಿ ಅಲೆಮಾರಿಗಳು ಆಡುವ ಭಾಷೆಯನ್ನೇ ಮಾತನಾಡುತ್ತಾರೆ.

3. **ತಮ್ಮದೇ ಆದ ಸಂಸ್ಕೃತಿ:**

ಅಲೆಮಾರಿ ಸಮುದಾಯಗಳು ತಮ್ಮದೆ ಆದ ಸಂಸ್ಕೃತಿ ಹೊಂದಿರುತ್ತವೆ. ದೊಂಬಿದಾಸರಲ್ಲಿ ಒಂದು ರೀತಿಯ ಸಂಸ್ಕೃತಿ ಇದ್ದರೆ ಹಕ್ಕಿಪಿಕ್ಕಿಯರಲ್ಲಿ ಮತ್ತೊಂದು ಸಂಸ್ಕೃತಿ ಇರುತ್ತದೆ

4. **ವಿಶಿಷ್ಟ ಪಾರಂಪರಿಕ ಉದ್ಯೋಗ:**

ಇವರಿಗೆ ನಿರ್ದಿಷ್ಟ ಉದ್ಯೋಗವಿಲ್ಲ. ಅಲೆಮಾರಿ ಸಮುದಾಯ ಯಾವ ಉದ್ಯೋಗದಲ್ಲಿ ತೊಡಗುತ್ತದೊ ಅದು ಅವರ ಪಾರಂಪರಿಕ ಉದ್ಯೋಗವಾಗುತ್ತದೆ.

ಉದಾಹರಣೆಗೆ ಹಕ್ಕಿಪಿಕ್ಕಿ ಸಮುದಾಯದ ಮೂಲ ವೃತ್ತಿ ವ್ಯಾಪಾರ ಮಾಡುವುದು. ಆಯುರ್ವೇದ ಔಷಧಿಗಳನ್ನು ಮಾರಾಟ ಮಾಡುವುದು, ಭಿಕ್ಷೆ ಬೇಡುವುದು, ಇತ್ಯಾದಿ.

## 5.4 ಅಲೆಮಾರಿ ಸಮುದಾಯಗಳ ಸಂಸ್ಕೃತಿ ಪರಿಚಯ:

ಅಲೆಮಾರಿ ಸಮುದಾಯಗಳ ಸಂಸ್ಕೃತಿ ಪರಿಚಯ ಕೆಳಕಂಡತಿವೆ.

### *ದೊಂಬಿದಾಸ:*

ಮಕ್ಕಳೇ, ನಿಮ್ಮ ಊರಿನಲ್ಲಿ ನಡೆಯುವ ಸಂತೆ ಜಾತ್ರೆಯನ್ನು ಕೇಳಿದ್ದೀರಾ ಜಾತ್ರೆ ಸಂತೆ ಮತ್ತು ಸಾರ್ವಜನಿಕ ಸ್ಥಳಗಳಲ್ಲಿ ಹಾಡು ಹೇಳುವುದನ್ನು ಕೇಳಿದ್ದಿರಾ ಸಾಮಾನ್ಯವಾಗಿ ಅವರೇ ದೊಂಬಿದಾಸರು. ಈ ವೃತ್ತಿ ಗಾಯಕರ ಪರಂಪರೆ ವಿಶ್ವವ್ಯಾಪ್ತಿಯೊದುದು. ಇವರು ಹೆಚ್ಚಾಗಿ ಕರ್ನಾಟಕ, ತಮಿಳುನಾಡು, ಕೇರಳ, ಆಂಧ್ರಪ್ರದೇಶಗಳಲ್ಲಿ ಕಂಡುಬರುತ್ತಾರೆ ವೈವಿಧ್ಯಮಯ ಬಟ್ಟೆಗಳನ್ನು ಧರಿಸಿರುತ್ತಾರೆ ಇವರಿಗೆ ದೊಂಬಿದಾಸರು, ಹೆಣ್ಣುವೇಷದವರು, ಕೋಲೆ ಬಸವ, ತಿರುಮಲರ ದಾಸರು, ದಂಗದಾಸರು, ಚೆನ್ನದಾಸರು, ಎಂಬ ಇತ್ಯಾದಿ ಹೆಸರುಗಳಿವೆ. ದೊಂಬಿದಾಸರು ವೈಷ್ಣವ ಸಂಪ್ರದಾಯಸ್ಥರು. ತಿರುಪತಿ ವೆಂಕಟರಮಣ ಸ್ವಾಮಿಯ ಭಕ್ತರು, ಸಂಪ್ರದಾಯದಂತೆ ಪ್ರತಿ ವರ್ಷ ಅಲ್ಲಿಗೆ ಕಾಣಿಕೆ ಸಲ್ಲಿಸುತ್ತಾರೆ.

ದೊಂಬಿದಾಸರು ಪಾಳುಗುಡಿಗಳಲ್ಲಿ, ಶಾಲೆ ಜಗಲಿಗಳಲ್ಲಿ, ವಿಶಾಲವಾದ ಕೆರೆಯಂಗಳಲ್ಲಿ, ದೊಡ್ಡ ಮರಗಳ ಕೆಳಗೆ ಡೇರೆಗಳನ್ನು ನಿರ್ಮಿಸಿ ವಾಸಿಸುತ್ತಾರೆ. ದೊಂಬಿದಾಸರಲ್ಲಿ ಪ್ರಾಥಮಿಕ ರಕ್ತ ಸಂಬಂಧ ವ್ಯವಸ್ಥೆಯಿದೆ. ಇವರ ವಿವಾಹಪದ್ಧತಿ ಹಿಂದಿನ ಕಾಲದಲ್ಲಿ ಎಂಟು ದಿನಗಳ ಕಾಲ ನಡೆದರೆ ಇಂದು ಎರಡು ದಿನಗಳು ನೆಡೆಯುತ್ತದೆ. ಮೊದಲ ದಿನಚಪ್ಪರ ಶ್ಯಾಸ್ತ್ರ ಎರಡನೇ ದಿನ ಮೂಹೂರ್ತ ಶ್ಯಾಸ್ತ್ರ ಕಂಡುಬರುತ್ತದೆ. ಇವರು ಭಧ್ರಕಾಳಮ್ಮ, ಉಲ್ಲೂರಮ್ಮ, ಸುಂಕಲಮ್ಮ, ಎಲ್ಲಮ್ಮ, ಮಳೆಯಮ್ಮ, ಕಟ್ಟಾಳಮ್ಮ ದೇವರುಗಳನ್ನು ಪೂಜಿಸುತ್ತಾರೆ, ಈ ಜನರಲ್ಲಿ ರೋಗಗಳು ಕಂಡುಬಂದರೆ ಸುತ್ತಮುತ್ತಲ ಪರಿಸರದಿಂದ, ಹಿತ್ತಲ ಅಂಗಳಗಳಿಂದ ಕಾಡುಗಳಲ್ಲಿ ದೊರೆಯುವ ಸಸ್ಯಗಳಿಂದ ಔಷಧಿಯನ್ನು ಮನೆ ಮದ್ದನ್ನಾಗಿ ತಯಾರಿಸಿಕೊಂಡು ಉಪಯೋಗಿಸುತ್ತಾರೆ. ದೊಂಬಿದಾಸರು ಭಿಕ್ಷೆಬೇಡುವುದು. ಬೇಟೆಯಾಡುವುದರ ಮೂಲಕ ತಮ್ಮ ಆರ್ಥಿಕ ಜೀವನವನ್ನು ನಡೆಸುತ್ತಾರೆ.

### *ಶಿಳ್ಳೇಕ್ಯಾತರು:*

ಮಕ್ಕಳೇ ನೀವು ಎಂದಾದರೂ ಸೂತ್ರದ ಗೊಂಬೆಗಳನ್ನು ಕುಣಿಸುವ ಹಾಗೂ ಇರುಳಿನಲ್ಲಿ ತೆರೆಯ ಮೇಲೆ ಛಾಯ ಚಿತ್ರಗಳನ್ನು ಮೂಡಿಸುವ, ಮನರಂಜನೆ ನೀಡುವುದರ

ಬಗ್ಗೆ ಕೇಳಿದ್ದಿರಾ? ಒಂದು ವೇಳೆ ಕೇಳಿದ್ದರೆ ಅಥವಾ ನೋಡಿದ್ದರೆ ಅವರು ಯಾರು ಎಂಬ ಪ್ರಶ್ನೆ ನಿಮಗೆ ಎದುರಾಗಿದೆಯೇ? ಅವರೇ ಶಿಳ್ಳೇಕ್ಯಾತರು. ಇವರು ಶಿಳ್ಳೇ ಎಂಬ ಜಾತಿಯ ಮೀನನ್ನು ಹಿಡಿಯುವುದರಲ್ಲಿ ನಿಸ್ಸೀಮರು. ಕ್ಯಾತರು ಎಂದರೆ ಹಿಡಿಯುವವರು. ಶಿಳ್ಳೇ ಜಾತಿಯ ಮೀನನ್ನು ಹಿಡಿಯುವವರಿಗೆ ಶಿಳ್ಳೇಕ್ಯಾತರು ಎಂದು ಕರೆಯುತ್ತಾರೆ. ಮೂಲ ವೃತ್ತಿ ಗೊಂಬೆಯಾಡಿಸುವುದು, ಕರ್ನಾಟಕದ ವಿವಿಧ ಭಾಗಗಲ್ಲಿ ಇವರನ್ನು ಗೊಂಬೆರಾಮರು, ಶಿಳ್ಳೇಕ್ಯಾತರು, ಬಾಗಡಿ, ದಾಯತಕರ, ಮೀನು ಗಿಳ್ಳಿಕಾತ್ಯರು ಇವರಿಗೆ ಇರುವ ಇತರ ನಾಮಧೇಯಗಳು, ಮೂಲದಲ್ಲಿ ಇವರು ಗಂಗಾ ನದಿಯ ಬಯಲು ಪ್ರದೇಶದಲ್ಲಿ ವಾಸವಾಗಿದ್ದರು.

ಅಶೋಕನ ಕಾಲದಲ್ಲಿ ಶಿಳ್ಳೇಕ್ಯಾತರು ಇದ್ದರೆಂದು ಊಹಿಸಲಾಗಿದೆ. ಕಳಿಂಗ ಯುದ್ಧದಲ್ಲಿ ಈ ಸಮುದಾಯದವರು ಯುದ್ಧ ಮಾಡಿ ಅನೇಕ ಸಾವು ನೋವುಗಳನ್ನು ಅನುಭವಿಸಿ ಮುಂದೆ ಅಲ್ಲಿಂದ ಸೌರಾಷ್ಟ್ರ ಅಂದರೆ ಇಂದಿನ ಗುಜರಾತ್, ಮಹಾರಾಷ್ಟ್ರ, ಲಾತೂರ. ಸೊಲ್ಲಾಪುರ, ಪಂಡರಾಪುರ. ಪ್ರದೇಶಗಳಿಗೆ ವಲಸೆ ಬಂದು ಜೀವನೋಪಾಯಕ್ಕಾಗಿ ಮೀನು ಹಿಡಿಯುವುದು, ಬೊಂಬೆಯಾಡಿಸುವುದನ್ನು ರೂಢಿಸಿಕೊಂಡರು. ಕ್ರಮೇಣ ಮರಾಠಾ ರಾಜ್ಯದಲ್ಲಿ ಸೈನಿಕರಾಗಿ ಸೇರಿಕೊಂಡರು, ಮರಾಠ ಸಂಸ್ಥಾನಗಳು ಪತನವಾದ ನಂತರ ದಕ್ಷಿಣ ಮುಂಬೈ ರಾಜ್ಯದಿಂದ ಕರ್ನಾಟಕ ಮತ್ತು ಆಂಧ್ರ ರಾಜ್ಯಗಳಿಗೆ ವಲಸೆ ಬಂದು. ತಮ್ಮ ತಮ್ಮ ಮೂಲ ವೃತ್ತಿಯನ್ನು ಅವಲಂಬಿಸಿ ಜೀವನ ಸಾಗಿಸುತ್ತಾರೆ.

ಶಿಳ್ಳೇಕ್ಯಾತರು ಮಹಾರಾಷ್ಟ್ರದ ಸತಾರಾ ಜಿಲ್ಲೆಯಿಂದ ಕರ್ನಾಟಕದ ಬೆಳಗಾವಿ, ಬಿಜಾಪುರ ಜಿಲ್ಲೆಯ ಮೂಲಕ ಕನ್ನಡ ನಾಡನ್ನು ಪ್ರವೇಶಿಸಿರುವುದು ಕಂಡು ಬರುತ್ತದೆ. ತದನಂತರ ಕರ್ನಾಟಕದಾದ್ಯಂತ ಪ್ರಸರಣಗೊಂಡು. ತೊಗಲುಗೊಂಬೆ ಸಂಪ್ರದಾಯ ಮತ್ತು ಮೀನು ಹಿಡಿಯುವ ವೃತ್ತಿಯ ಮೂಲಕ ನದಿ, ಕೆರೆ, ಹೊಳೆ, ಹಳ್ಳಗಳ ದಡದಲ್ಲಿ ವಾಸಿಸುತ್ತಿರುವುದು ಕಂಡುಬರುತ್ತದೆ. ಶಿಳ್ಳೇಕ್ಯಾತರು ಯಾವ ಯಾವ ಪ್ರದೇಶಗಳಲ್ಲಿ ಅಲೆದಾಡುವರೋ ಆಯಾ ಪ್ರದೇಶದ ಉಡುಗೆ ತೊಡುಗೆಗಳಿಗೆ ಹೊಂದಿಕೊಳ್ಳುತ್ತಾರೆ.

ಶಿಳ್ಳೇಕ್ಯಾತರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುವವರು. ಸಂಚರಿಸುವಾಗ ದನ, ಕರುಗಳ ಮತ್ತು ಕುದುರೆಗಳ, ಒಂಟೆತ್ತಿನ ಗಾಡಿಗಳ ಮೇಲೆ ತಮ್ಮ ಸಾಮಾನು ಸರಂಜಾಮುಗಳನ್ನು ಹೇರಿಕೊಂಡು ಹೋಗಿ ಅಥವಾ ಕಾವಡಿಯ ಮೂಲಕ ಹೊತ್ತುಕೊಂಡು ಹೋಗಿ ಊರ ಚಾವಡಿ ಧರ್ಮಶಾಲೆ, ಗುಡಿ ಗುಂಡಾರ, ಇಲ್ಲವೇ ಊರ ಹೊರಗೆ ತಮ್ಮದೇ ಆದ ಡೇರೆಗಳಲ್ಲಿ ಇವರು ವಾಸ ಮಾಡುತ್ತಾರೆ. ಒಮ್ಮೆ ಡೇರೆ ಹಾಕಿದರೆ ಕಡಿಮೆಯೆಂದರೂ ಎಂಟರಿಂದ ಹದಿನೈದು ದಿನಗಳು ವಾಸಿಸುತ್ತಾರೆ. ಇವರು ಮೀನು ದೊರೆಯುವ ಪ್ರದೇಶಕ್ಕೆ ಹೋದರೆ ಹೊಳೆಯ ದಂಡೆಯಲ್ಲಿ ಮೂರು ನಾಲ್ಕು ತಿಂಗಳವರೆಗೆ ವಾಸ ಮಾಡುತ್ತಾರೆ.

ಸಮುದಾಯದ ಕೌಟುಂಬಿಕ ವ್ಯವಸ್ಥೆ ಪುರುಷ ಪ್ರಧಾನತೆಯುಳ್ಳದ್ದಾಗಿದೆ. ಸ್ತ್ರೀಯರಿಗೆ ನ್ಯಾಯ ಪಂಚಾಯಿತಿ, ಧಾರ್ಮಿಕ ವಿಧಿ ವಿಧಾನಗಳಲ್ಲಿ ಯಾವುದೇ ಸ್ಥಾನಮಾನ

ಕಲ್ಪಿಸಲಾಗಿಲ್ಲ.

ಶಿಳ್ಳೇಕ್ಯಾತರು ಮದುವೆ ಮಾಡುವಾಗ ಹೆಚ್ಚಾಗಿ ರಕ್ತ ಸಂಬಂಧಿಕರಲ್ಲಿಯೆ ಸಂಬಂಧ ಬೆಳೆಸುವರು. ಅಕ್ಕನ ಅಥವಾ ಸೋದರ ಮಾವನ ಮಗಳನ್ನು ಮದುವೆಯಾಗುವರು. ಇವರು ಯುಗಾದಿ, ನವರಾತ್ರಿ, ಬನ್ನಿ ಮುರಿಯುವುದು. ದೀಪಾವಳಿ, ನೀರುದುಂಬುವ ಹಬ್ಬ, ಹಿರೇರ ಹಬ್ಬ, ಸರಸ್ವತಿ ಪೂಜೆ, ಬಲಿಪದ್ಧತಿ, ಮುಂತಾದ ಹಬ್ಬಗಳನ್ನು ಮಾಡುವರು. ಕರಿಯಮ್ಮ, ಹಕ್ಕಿ ಕರೆವ್ವ, ಬಂಡೆವ್ವ, ದುರಗವ್ವ, ಎಲ್ಲಮ್ಮ, ದೇವರುಗಳನ್ನು ಪೂಜಿಸುವರು, ಸಣ್ಣ ಪುಟ್ಟ ರೋಗಗಳಿಗೆ ಸ್ವತ: ತಾವೆ ಔಷಧಿಗಳನ್ನು ತಯಾರಿಸಿಕೊಳ್ಳುತ್ತಿದ್ದರು.

ಜೀವನಕ್ಕಾಗಿ ಪುರುಷರ ವೃತ್ತಿಗಳೆಂದರೆ ತೊಗಲುಗೊಂಬೆಯಾಟ ಕರಿಕಟ್ಟುವುದು, ನಾಟಕ ಆಡುವುದು ಕೀರ್ತನೆ, ಬೇಟೆ, ಮೀನಿಬೇಟೆ, ಬಲೆ ಹೇಣೆಯುವುದು, ಚಾಪೆಹೆಣೆಯುವುದು, ಜನಪದ ಹಾಡುಗಾರಿಕೆ ಮುಂತಾದವುಗಳು.

*ಹಂದಿಜೋಗಿಯರು:*

ತಲೆಗೆ ಬಣ್ಣದ ಮುಂಡಾಸು, ಮುಂಡಾಸಿಗೊಂದು ತ್ರಿಶೂಲ, ಮುಂಡಾಸಿನ ಸುತ್ತ ಗಾಜಿನ ಕಡ್ಡಿಯ ಗೋಳೋಪು, ಕಚ್ಚೆಪಂಚೆ, ಕರಿಯ ನಿಲುವಂಗಿ, ನೇತಾಡುವ ಮುತ್ತಿನ ಸರ, ನಿಲುವಂಗಿ ಮೇಲೆ ಅಡ್ಡ ಶಲ್ಯ, ಕಿವಿಗೆ ಕರ್ಣ ಕುಂಡಲ ಮತ್ತು ಕಾಪಾಲಿ ಕೈಯಲ್ಲಿ ಕಿನ್ನರಿ, ಕಾಲಿಗೆ ಗೆಜ್ಜೆ, ಹೆಗಲಿಗೆ ಜೋಳಿಗೆ ಇಂತಹ ವೇಷ ತೊಟ್ಟಿರುವ ವ್ಯಕ್ತಿಯ ಬಗ್ಗೆ ನೀವು ಕೇಳಿರುವುದಿಲ್ಲವೇ? ಕೇಳಿದ್ದೀರಾ ಎಂದಾದರೆ ಅವರು ಯಾರು? ಅವರೇ ಹಂದಿ ಜೋಗಿಯರು. ಇವರು ಮಹಾರಾಷ್ಟ್ರದ ಗಡಿ ಪ್ರದೇಶವಾದ ಬೆಳಗಾವಿ ಮೂಲಕ ಕರ್ನಾಟಕಕ್ಕೆ ಪ್ರವೇಶಿಸಿದ್ದಾರೆ ಎಂಬುದು ನಂಬಿಕೆಯಾಗಿದೆ. ಇವರಿಗೆ ಹಂದಿಜೋಗಿ, ಡಬ್ಬಜೋಗಿ, ನರಸಣ್ಣ ಜೋಗಿ, ಬಳೆಗಾರ ಜೋಗಿ, ರಾಬಳ ಜೋಗಿ, ಶಿವಜೋಗಿ, ಜೋಗಿ ಪುರುಷ ಇತ್ಯಾದಿ ಹೆಸರುಗಳಿವೆ.

ಹಂದಿಜೋಗಿಗಳು ಸಾಮಾಜಿಕವಾಗಿ ತೀರಾ ಹಿಂದುಳಿದವರಾಗಿದ್ದಾರೆ, ಇತರ ಸಮುದಾಗಳೊಂದಿಗೆ ಮುಕ್ತವಾಗಿ ಭಾಗವಹಿಸುವಿಕೆಗೆ ಸಮಾಜವು ಅವಕಾಶ ಮಾಡಿಕೊಟ್ಟಿಲ್ಲ ಹೋಟೆಲುಗಳಿಗೆ, ದೇವಸ್ಥಾನಗಳಿಗೆ ಮುಕ್ತ ಪ್ರವೇಶ ಈ ಹಿಂದೆ ಇರಲಿಲ್ಲ. ಸವರ್ಣೀಯರ ಮನೆಗಳಿಗೂ ಪ್ರವೇಶವಿರಲಿಲ್ಲ. ಮನೆಯಂಗಳದ ಮೂಲೆಯಲ್ಲಿ ಆಹಾರವನ್ನು ಹಾಳೆ ಅಥವಾ ಮುತ್ತಗದ ಎಲೆಯಲ್ಲಿ ನೀಡುತ್ತಿದ್ದರು. ಸಹ ಪಂಕ್ತಿ ಭೋಜನಕ್ಕೆ ಅವಕಾಶವಿರಲಿಲ್ಲ. ಹಂದಿಜೋಗಿಗಳು ಅಲೆಮಾರಿಗಳಾಗಿದ್ದು, ಭಿಕ್ಷಾಟನೆಯಿಂದಲೇ ಹೊಟ್ಟೆ ಹೊರೆಯುತ್ತಾರೆ. ಗಂಡಸರು ತಮ್ಮ ಸಾಂಪ್ರದಾಯಿಕ ವೇಷ ಭೂಷಣದಲ್ಲಿ ಮನೆಮನೆಗೆ ಹೋಗಿ ಭಿಕ್ಷೆ ಬೇಡುತ್ತಾರೆ.

ಹಂದಿಜೋಗಿ ಸಮುದಾಯದವರು ನಗರ ಪ್ರದೇಶಕ್ಕಿಂತ ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದಾರೆ. ನಗರಗಳ ಕೊಳಗೇರಿಗಳಲ್ಲಿ ಅಥವಾ ಬಯಲು ಜಾಗಗಳಲ್ಲಿ ಗುಡಾರ ಇಲ್ಲವೆ ಚಿಕ್ಕ ಗುಡಿಸಲುಗಳನ್ನು ಹಾಕಿಕೊಂಡು, ಜೀವನ ನಿರ್ವಹಣೆ

ಮಾಡುವುದನ್ನು ಕಾಣಬಹುದಾಗಿದೆ. ಇವರು ಡೇರೆಗಳನ್ನು ಸ್ಥಳೀಯವಾಗಿ ದೊರೆಯುವ ಬಿದಿರು, ತೆಂಗಿನ ಸೋಗೆ ಹಾಗೂ ಹರಕಲು ಬಟ್ಟೆಗಳಿಂದ ರಚಿಸುವರು. ಗುಡಿಸಲು ಅಥವಾ ಡೇರೆಗಳನ್ನು ಗುಂಪು ಗುಂಪಾಗಿ ಒಂದೇ ಕಡೆ ಹಾಕುವರು. ಹೆಚ್ಚಾಗಿ ನೀರಿರುವ ಪ್ರದೇಶಗಳಾದ ನದಿ, ತೋಡು. ಹಳ್ಳ, ಕೆರೆಯ ಬದಿಗಳಲ್ಲಿ ಡೇರೆ ಹಾಕುತ್ತಿದ್ದರು. ಖಾಯಂ ಆಗಿ ನೆಲೆವೂರಲು, ಆರಂಬಿಸಿದ ನಂತರ ಸರ್ಕಾರ ನೀಡಿದ ಮನೆ, ನಿವೇಶನಗಳಲ್ಲಿ ವಾಸಿಸುತ್ತಾರೆ. ವಿಶೇಷವೆಂದರೆ ಈ ಸಮುದಾಯ ಜನರು ಗುಂಪು ಗುಂಪಾಗಿ ವಾಸಿಸುತ್ತಾರೆ. ಕೆಲವು ಕಡೆ ಜೋಗಿ ಕಾಲೋನಿ ಎಂಬುದಾಗಿಯೇ ಕರೆಯುತ್ತಾರೆ. ಊರಿಂದೂರಿಗೆ ವಲಸೆ ಹೋಗುತ್ತಿರುವುದರಿಂದ ಇದು ಸಾಧ್ಯವೂ ಇಲ್ಲ. ಬದಲಾಗಿ ಭಿಕ್ಷಾಟನೆಗೆ ಹೋಗುವಾಗ ಕೈಯಲ್ಲಿರುವ ಹಂಡಿ ಅಂದರೆ ಕಿನ್ನರಿಯನ್ನು ಡೇರೆಯಲ್ಲಿಟ್ಟು ಪೂಜೆ ಮಾಡುತ್ತಾರೆ. ವಾರ್ಷಿಕ ಪೂಜೆಯ ಸಂದರ್ಭದಲ್ಲಿ ಒಂದು ಸ್ಥಳ ನಿಗದಿ ಮಾಡಿ ತಾತ್ಕಾಲಿಕವಾಗಿ ದುಂಡು ಕಲ್ಲನ್ನು ಹಾಕಿ ಪೂಜೆ ಮಾಡುತ್ತಾರೆ.

ಹಂದಿಜೋಗಿಯರಲ್ಲಿ ವರದಕ್ಷಿಣೆ ಪದ್ಧತಿ ಇಲ್ಲ. ಗಂಡು ಮತ್ತು ಹೆಣ್ಣಿಗೂ ಸಮಾನ ಅವಕಾಶವಿತ್ತು. ತಾರತಮ್ಯ ವಿರಲಿಲ್ಲ. ಹಂದಿಜೋಗಿಗಳು ಗೌರಿಹಬ್ಬ, ಮಾರ್ನವಮಿ, ದೀಪಾವಳಿ, ಶಿವರಾತ್ರಿ, ಹಬ್ಬಗಳನ್ನು ಆಚರಿಸುತ್ತಾರೆ, ಜನಪದ ಮತ್ತು ಮಾಟ ಮಂತ್ರದ ಮೇಲೆ ನಂಬಿಕೆ ಇತ್ತು,

ಹಂದಿಜೋಗಿಗಳು ಜೀವನಕ್ಕಾಗಿ ಭಿಕ್ಷಾಟನೆಯ ಜೊತೆಗೆ, ಬೇಟೆಯಾಡುವುದು, ಕೃಷಿ, ಭೂ ಒಡೆತನ, ಪಶುಪಾಲನೆ, ಮುಂತಾದ ಕೆಲಸಗಳನ್ನು ಮಾಡುತ್ತಾರೆ.

ಇವರ ಮಾತೃಭಾಷೆ ಮರಾಠಿ, ಸ್ಥಳೀಯವಾಗಿ ಸಂಚರಿಸುವಾಗ ಪ್ರದೇಶಕ್ಕೆ ಅನುಗುಣವಾಗಿ ಬೇರೆ ಬೇರೆ ಭಾಷೆಗಳನ್ನು ಮಾತನಾಡುತ್ತಾರೆ.

### *ಹಕ್ಕಿ ಪಿಕ್ಕಿ*

ಮಕ್ಕಳೇ ನೀವು ಶಾಲೆ ಮುಗಿದ ಮೇಲೆ ರಸ್ತೆಯ ಪಕ್ಕ ನಡೆದು ಹೊಗುವಾಗ ಅಥವಾ ಸ್ನೇಹಿತರ ಜೊತೆ ಮನೆಯ ಹತ್ತಿರ ಆಟವಾಡುತ್ತಿರುವಾಗ ರಸ್ತೆಯಲ್ಲಿ ಜೋಳಿಗೆ ಹಾಕಿಕೊಂಡು ಕೈಯಲ್ಲಿ ಸೂಜಿ, ಕರಿಮಣಿ, ರುದ್ರಾಕ್ಷಿ, ದಬ್ಬಣ, ಕಸ್ತೂರಿ ಹಿಡಿದುಕೊಂಡು ಸೂಜಿ ಬೇಕವ್ವ ಸೂಜಿ ಎಂದು ಕೂಗುವರು, ಕೂದಲು ಕೊಟ್ಟರೆ ಪಿನ್ನ ಕೊಡುತ್ತೇವೆ ಎಂದು ಕೂಗುವರು. ಪಿಪಿ ಮಾರುತ್ತಾ ಬರುತ್ತಾರೆ. ಇನ್ನೂ ಕೆಲವರು ಕಾಡಿನಿಂದ ಮರದ ಬೇರುಗಳನ್ನು ತಂದು ಖಾಯಿಲೆಗಳು ವಾಸಿಯಾಗುತ್ತವೆ ಎಂದು ಬೀದಿ ಬೀದಿಯಲ್ಲಿ ಕುಳಿತು ಮಾರಾಟ ಮಾಡುತ್ತಾರೆ. ಹೀಗೆ ಬೇರೆ ಬೇರೆ ವೃತ್ತಿಯಲ್ಲಿ ನಿರತರಾಗಿರುವ ಜನರನ್ನು ಗಮನಿಸಿರಬಹುದು. ಇವರುಗಳು ಯಾರು ಎಂದು ತಿಳಿದಿದ್ದಿರಿ? ಇವರುಗಳು ಮತ್ಯಾರು ಅಲ್ಲ ಹಕ್ಕಿಪಿಕ್ಕಿ ಅಲೆಮಾರಿ ಸಮುದಾಯದವರು.

**ನಿಮಗೆ ತಿಳಿದಿರಲಿ**

ಹಕ್ಕಿ ಪಿಕ್ಕಿ ಸಮುದಾಯದವರು ಬೆಂಗಳೂರು, ರಾಮನಗರ, ತುಮಕೂರು, ಬಳ್ಳಾರಿ, ಕೋಲಾರ ಮುಂತಾದ ಕಡೆ ಹೆಚ್ಚಾಗಿ ಕಂಡುಬರುತ್ತಾರೆ.

ಇವರು ಅರೆ ಮತ್ತು ಸಂಪೂರ್ಣ ಅಲೆಮಾರಿಗಳಾಗಿದ್ದಾರೆ. ರಸ್ತೆಯ ಪಕ್ಕದಲ್ಲಿ ಡೇರೆಗಳನ್ನು, ಗುಡಿಸಲುಗಳನ್ನು ನಿರ್ಮಿಸಿಕೊಂಡು ಪೀಪಿ, ಕರಿಮಣಿ, ಸೂಜಿ, ಮುಂತಾದ ವಸ್ತುಗಳನ್ನು ಮಾರಾಟಮಾಡಿ ವಾಸಿಸುತ್ತಾರೆ.

ಹಕ್ಕಿಪಿಕ್ಕಿಯರಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಇರುವುದರಿಂದ ಹೆಣ್ಣು ಹೆಚ್ಚಿನ ಸ್ಥಾನಮಾನವನ್ನು ಹೊಂದಿರುತ್ತಾಳೆ. ಮನೆಯ ಎಲ್ಲಾ ಜವಬ್ದಾರಿಯನ್ನು ಆಕೆಯೇ ನಿರ್ವಹಿಸುತ್ತಾಳೆ. ಕುಟುಂಬದ ಮಕ್ಕಳು ವಿವಾಹದ ನಂತರ ಪ್ರತ್ಯೇಕ ಮನೆಯಲ್ಲಿ ವಾಸಿಸಲು ಇಚ್ಚಿಸುತ್ತಾರೆ. ಒಂದು ವೇಳೆ ಗಂಡ ಅಥವಾ ಹೆಂಡತಿ ವಯಸ್ಸಿನಲ್ಲಿ ಸತ್ತರೆ ಮತ್ತೊಂದು ಮದುವೆ ಮಾಡಿಸುತ್ತಾರೆ.

ಹಕ್ಕಿಪಿಕ್ಕಿಯರು ಅನಕ್ಷರಸ್ತರು ಯಾಕೆಂದರೆ ಒಂದು ಕಡೆ ನೆಲೆ ನಿಲ್ಲದೆ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೊಗುತ್ತಾರೆ, ವಲಸೆ ಹೋಗುವಾಗ ಜೊತೆಯಲ್ಲಿ ತಮ್ಮ ಮಕ್ಕಳನ್ನು ಕರೆದುಕೊಂಡು ಹೋಗುತ್ತಾರೆ. ಒಂದು ಸ್ಥಳದಲ್ಲಿ ಗುಡಿಸಲು ನಿರ್ಮಿಸಿದರೆ ಸುಮಾರು ಮೂರರಿಂದ ನಾಲ್ಕು ತಿಂಗಳು ವಾಸಿಸುತ್ತಾರೆ. ಇದರಿಂದ ಅವರು ಶಿಕ್ಷಣದ ಕಡೆ ಗಮನ ಹರಿಸಲು ಸಾಧ್ಯವಿಲ್ಲ. ಈ ಆಧುನಿಕ ಕಾಲದಲ್ಲಿ ತಮ್ಮ ಮೂಲಭೂತ ಅವಶ್ಯಕತೆಗಳಾದ ಊಟ, ಬಟ್ಟೆ ಮತ್ತು ಇರಲು ನೆಲೆಯನ್ನು ಹುಡುಕಿಕೊಳ್ಳುವುದೇ ಸವಾಲಾಗಿದೆ.

ಇವರು ಬೇಟೆಯಾಡುವುದು, ಭಿಕ್ಷೆ ಬೇಡುವುದು, ಗುಡಿಕೈಗಾರಿಕೆ, ವ್ಯಾಪಾರ ಮಾಡುವುದು, ಇವರ ಪ್ರಮುಖ ವೃತ್ತಿಯಾಗಿದ್ದವು.

ಚಾಮುಂಡಿ, ಎಲ್ಲಮ್ಮ, ಕಾಳಿಕ, ದುರ್ಗಮ್ಮ ದೇವರುಗಳನ್ನು ಪೂಜಿಸುತ್ತಾರೆ. ಇವರಲ್ಲಿ ಬಾಲ್ಯವಿವಾಹ ಪದ್ದತಿ ಕಂಡುಬರುತ್ತದೆ.

ಜಾಗತೀಕರಣದ ಪ್ರಭಾವದಿಂದಾಗಿ ಹಕ್ಕಿ ಪಿಕ್ಕಿ ಜನರು ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಬದಲಾಗಿದ್ದಾರೆ. ಬೇಟೆ, ವ್ಯಾಪಾರ, ಜೊತೆಗೆ ವ್ಯವಸಾಯ ಮಾಡುವುದನ್ನು ರೂಢಿಮಾಡಿಕೊಂಡಿದ್ದಾರೆ. ಸರ್ಕಾರದ ಸವಲತ್ತು ಪಡೆದು ಒಂದು ಕಡೆ ನೆಲೆ ನಿಲ್ಲುತ್ತಿರುವುದನ್ನು ಕಾಣಬಹುದು.

### ಹಕ್ಕಿ ಪಿಕ್ಕಿಗಳ ಉತ್ಪಾದನಾ ಚಟುವಟಿಕೆಗಳು:

ಹಕ್ಕಿ, ಪ್ರಾಣಿ, ಜಲಜೀವಿಗಳ ಭೇಟೆ, ದಬ್ಬಳ ತಯಾರಿಕೆ, ರುದ್ರಾಕ್ಷಿ, ಗಿಡಮೂಲಿಕೆ ಔಷಧಿ ಉತ್ಪನ್ನ, ಮೂರ್ಚೆರೋಗ, ಮೂಲವ್ಯಾಧಿ, ರೋಗದ ಗಿಡಮೂಲಿಕ ಔಷಧಿ ತಯಾರಿಕೆ ಇತ್ಯಾದಿ ಇವರ ಉತ್ಪಾದನಾ ಚಟುವಟಿಕೆಗಳು.

## 5.5 ಅಲೆಮಾರಿ ಸಮುದಾಯಗಳು ಎದುರಿಸುತ್ತಿರುವ ಸಮಸ್ಯೆಗಳು

ಅಲೆಮಾರಿ ಸುಮುದಾಯಗಳು ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳು ಯಾವುವೆಂದರೆ:

1. ಅನಕ್ಷರತೆ
2. ಬಡತನ
3. ಹೊಂದಾಣಿಕೆಯ ಸಮಸ್ಯೆ
4. ನಿರುದ್ಯೋಗ
5. ಚಹರೆಯ ಸಮಸ್ಯೆ

## 5.6 ಅಲೆಮಾರಿ ಸಮುದಾಯದ ಸಂಘಟನೆ:

ಅಲೆಮಾರಿಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿರುತ್ತಾರೆ. ವಲಸೆ ಹೋಗುವುದರಿಂದ ಆರ್ಥಿಕ ಅಭಿವೃದ್ಧಿ ಇಲ್ಲ. ಒಂದು ಕಡೆ ನೆಲೆ ಇಲ್ಲ. ಸರ್ಕಾರಿ ಸವಲತ್ತುಗಳು ದೊರೆಯುತ್ತಿಲ್ಲ. ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಸಾಧ್ಯವಾಗುತ್ತಿಲ್ಲ. ಮಳೆಗಾಲ ಚಳಿಗಾಲದಲ್ಲಿ ವಸತಿ ಸಮಸ್ಯೆ ಎದುರಿಸುತ್ತಾರೆ. ಬೇರೆ ಸಮುದಾಯಗಳ ಜೊತೆಯಲ್ಲಿ ಬೆರೆಯಲು ಸಾಧ್ಯವಾಗುವುದಿಲ್ಲ. ಇಂತಹ ಹಲವಾರು ಸಮಸ್ಯೆಗಳೂ ಅಲೆಮಾರಿಗಳ ಸಂಘಟನೆಗೆ ಕಾರಣವಾದವು.

ಚದುರಿರುವ ಅಲೆಮಾರಿ ಸಮುದಾಯಗಳನ್ನು ಒಂದು ಕಡೆ ತರಲು ಹಲವಾರು ಸಂಘಗಳನ್ನು ಸ್ಥಾಪಿಸಲಾಯಿತು. 1980 ರಲ್ಲಿ ಜೋಗಿ ಸಂಘ. ಬಿಜಾಪುರದಲ್ಲಿ 1993 ರಲ್ಲಿ ಶಿಳ್ಳೆಕ್ಯಾತರ ಕ್ಷೇಮಾಭಿವೃದ್ಧಿ ಸಂಘ. 1999 ರಲ್ಲಿ ಕರ್ನಾಟಕ ರಾಜ್ಯ ಶಿಳ್ಳೇಕ್ಯಾತ ಕ್ಷೇಮಾಭಿವೃದ್ಧಿ ಸಂಘವನ್ನು ನೋಂದಾಯಿಸಲಾಯಿತು. ಹೀಗೆ ಹಲವಾರು ಸಂಘಗಳು ಅಂದಿನಿಂದಲೇ ಪ್ರಾರಂಭವಾದವು ಇಂದು ಹಲವಾರು ಸಂಘಟನೆಗಳು ಪ್ರಾರಂಭವಾಗಿವೆ. ಶಿಳ್ಳೇಕ್ಯಾತ, ದೊಂಬಿದಾಸ, ಹಂದಿಜೋಗಿ, ಹಕ್ಕಿಪಿಕ್ಕಿ ಮುಂತಾದ ಸಂಘಗಳು ಕಾರ್ಯನಿರ್ವಹಿಸುತ್ತಾ ಅವರ ಹಕ್ಕುಗಳಿಗಾಗಿ ಹೋರಾಡುತ್ತಿದ್ದಾರೆ.

## ಸಾರಾಂಶ

1. ಉದ್ಯೋಗ ಮತ್ತು ಜೀವನ ನಿರ್ವಹಣೆಗಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೊಗುವವರೇ ಅಲೆಮಾರಿಗಳು.

2. ಅಲೆಮಾರಿ ಸಮುದಾಯಗಳು ಯಾವುವೆಂದರೆ ಹೆಳವ, ಜೋಗಿ, ಗಾರುಡಿ, ವೀರ, ಕಿಳ್ಳೇಕ್ಯಾತ, ಹಂದಿಜೋಗಿ, ದೊಂಬಿದಾಸ, ಕಟಬು, ಬೆಸ್ತರ್, ಸರೋಡಿ, ಶಿಕ್ಕಲಿಗಾರ, ಬಾಜಿಗರ್ ಮುಂತಾದವುಗಳು.

3. ದೊಂಬಿದಾಸರು ಪಾಳುಗುಡಿಗಳಲ್ಲಿ, ಶಾಲೆ ಜಗಲಿಗಳಲ್ಲಿ, ಟೆಂಟುಗಳಲ್ಲಿ, ಕೆರೆಯಂಗಳಲ್ಲಿ, ದೊಡ್ಡ ಮರಗಳ ಕೆಳಗೆ ಡೇರೆಗಳನ್ನು ನಿರ್ಮಿಸಿ ವಾಸಿಸುತ್ತಾರೆ.

4. ದೊಂಬಿದಾಸರು ಭಿಕ್ಷೆಬೇಡುವುದು ಮತ್ತು ಬೇಟೆಯಾಡುವುದರ ಮೂಲಕ ತಮ್ಮ ಆರ್ಥಿಕ ಜೀವನವನ್ನು ನಡೆಸುತ್ತಾರೆ.

5. ಗೊಂಬೆರಾಮರು, ಶಿಳ್ಳೇಕ್ಯಾತರು, ಬಾಗಡಿ, ದಾಯತಕರ, ಮೀನು ಶಿಳ್ಳೆಕ್ಯಾತರು ಇವರಿಗೆ ಇರುವ ಇತರ ನಾಮಧೇಯಗಳು.

6. ಅಶೋಕನ ಕಾಲದಲ್ಲಿ ಶಿಳ್ಳೇಕ್ಯಾತರು ಇದ್ದರೆಂದು ಊಹಿಸಲಾಗಿದೆ.

7. ಶಿಳ್ಳೇಕ್ಯಾತರು ಮಾಡುವ ವೃತ್ತಿಗಳೆಂದರೆ ತೊಗಲುಗೊಂಬೆಯಾಟ ಕರಿಕಟ್ಟುವುದು, ನಾಟಕ ಆಡುವುದು, ಕೀರ್ತನೆ, ಬೇಟೆ, ಮೀನಿನ ಬೇಟೆ, ಬಲೆ ಹೆಣೆಯುವುದು, ಚಾಪೆಹೆಣೆಯುವುದು, ಜನಪದ ಹಾಡುಗಾರಿಕೆ ಮುಂತಾದವುಗಳು.

8. ಹಂದಿಜೋಗಿಗೆ ಇರುವ ವಿವಿಧ ಹೆಸರುಗಳೆಂದರೆ ಹಂದಿಜೋಗಿ, ಡಬ್ಬಜೋಗಿ, ನರಸಣ್ಣ ಜೋಗಿ, ಬಳೆಗಾರ ಜೋಗಿ, ರಾಬಳ ಜೋಗಿ, ಶಿವಜೋಗಿ, ಜೋಗಿ ಪುರುಷ ಇತ್ಯಾದಿ ಇವರ ಹೆಸರುಗಳಾಗಿವೆ.

9. ಹಕ್ಕಿಪಿಕ್ಕಿಗಳು ಅರೆ ಮತ್ತು ಸಂಪೂರ್ಣ ಅಲೆಮಾರಿಗಳಾಗಿದ್ದಾರೆ.

10. 1980 ರಲ್ಲಿ ಜೋಗಿ ಸಂಘ. 1993 ರಲ್ಲಿ ಶಿಳ್ಳೆಕ್ಯಾತರ ಕ್ಷೇಮಾಭಿವೃದ್ಧಿ ಸಂಘ 1999 ರಲ್ಲಿ ಕರ್ನಾಟಕ ರಾಜ್ಯ ಶಿಳ್ಳೇಕ್ಯಾತ ಕ್ಷೇಮಾಭಿವೃದ್ಧಿ ಸಂಘ ಇವುಗಳು ಅಲೆಮಾರಿ ಸಮುದಾಯಗಳ ಸಂಘಗಳು.

## ಅಭ್ಯಾಸ

### I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:

1. ಭಾರತದಲ್ಲಿ ________ಗಿಂತಲೂ ಹೆಚ್ಚು ಅಲೆಮಾರಿಗಳಿದ್ದಾರೆ.

2. ಶಿಳ್ಳೇಕ್ಯಾತ ಸಮುದಾಯದ ಕೌಟುಂಬಿಕ ವ್ಯವಸ್ಥ ________ಪ್ರಧಾನ್ಯತೆಯುಳ್ಳದ್ದಾಗಿದೆ.

3. ಹಂದಿಜೋಗಿಯರಲ್ಲಿ _______ಪದ್ಧತಿ ಇಲ್ಲ.
4. ಶಿಳ್ಳೇಕ್ಯಾತ ಕ್ಷೇಮಾಭಿವೃದ್ಧಿ ಸಂಘವನ್ನು _______ರಲ್ಲಿ ನೊಂದಾಯಿಸಲಾಯಿತು.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಅಲೆಮಾರಿಗಳು ಎಂದರೆ ಯಾರು?
2. ಶಿಳ್ಳೇಕ್ಯಾತರು ಯಾವ ಹಬ್ಬಗಳನ್ನು ಆಚರಿಸುತ್ತಾರೆ?
3. ಹಂದಿಜೋಗಿಯರಲ್ಲಿ ಯಾರಿಗೆ ಸಮಾನ ಅವಕಾಶವಿತ್ತು?
4. ಹಕ್ಕಿಪಿಕ್ಕಿಗಳ ಎರಡು ಉತ್ಪಾದನಾ ಚಟುವಟಿಕೆಗಳನ್ನು ಬರೆಯಿರಿ?

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

1. ದೊಂಬಿದಾಸರು ಎಲ್ಲಿ ವಾಸಿಸುತ್ತಾರೆ?
2. ಶಿಳ್ಳೇಕ್ಯಾತರ ವಿವಿಧ ಹೆಸರುಗಳನ್ನು ತಿಳಿಸಿ.
3. ಅಲೆಮಾರಿ ಸಮುದಾಯದ ಯಾವುದಾದರೂ ಎರಡು ಸಂಘಟನೆಗಳನ್ನು ಹೆಸರಿಸಿ.
4. ಅಲೆಮಾರಿ ಸಮುದಾಯದ ಸಮಸ್ಯೆಗಳು ಯಾವುವು?

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಅಲೆಮಾರಿ ಸಮುದಾಯಗಳ ಲಕ್ಷಣಗಳನ್ನು ವಿವರಿಸಿ.
2. ದೊಂಬಿದಾಸರ ಬಗ್ಗೆ ಬರೆಯಿರಿ.

3. ಹಂದಿಜೋಗಿಗಳ ಕುರಿತು ಟಿಪ್ಪಣಿ ಬರೆಯಿರಿ.
4. ಅಲೆಮಾರಿ ಸಮುದಾಯಗಳು ಯಾವುವು? ಹಕ್ಕಿ ಪಿಕ್ಕಿ ಅಲೆಮಾರಿಗಳ ಬಗ್ಗೆ ಟಿಪ್ಪಣಿ ಬರೆಯಿರಿ.

**ಸಲಹಾತ್ಮಕ ಚಟುವಟಿಕೆಗಳು:**

ರಿ ಸಮುದಾಯಗಳು ವಾಸಿಸುವ ಸ್ಥಳದ ಬಗ್ಗೆ ನಿಮ್ಮ ಅಭಿಪ್ರಾಯವನ್ನು ಬರೆಯಿರಿ.

ರಿ ಸಮುದಾಯಗಳ ಬಗ್ಗೆ ಅಂತರ್ಜಾಲದ ನೆರವಿನಿಂದ ಮಾಹಿತಿಯನ್ನು ಸಂಗ್ರಹಿಸಿ.

# ಅಧ್ಯಾಯ- 6 ಭಾರತದ ಸಾಮಾಜಿಕ ಸಮಸ್ಯೆಗಳು (Social problems of India)

**ಕಲಿಕಾಂಶಗಳು:**

ತೆಯ ಬಗ್ಗೆ ತಿಳಿಯೋಣ.

ರ ಮತ್ತು ಅದರ ಕಾರಣಗಳನ್ನು ತಿಳಿದು ಚರ್ಚಿಸೋಣ.

ಿ ದೌರ್ಜನ್ಯ ತಡೆಗಟ್ಟಲು ಇರುವ ಪರಿಹಾರ ಕ್ರಮಗಳನ್ನು ಅಧ್ಯಯನ ಮಾಡೋಣ.

ಾನದಿಂದಾಗುವ ತೊಂದರೆಗಳನ್ನು ತಿಳಿದು ಪರಿಹಾರ ಕಂಡುಕೊಳ್ಳೋಣ.

ರ್ಕ ಕಲಹಕ್ಕೆ ಕಾರಣ ಮತ್ತು ಅದರ ನಿವಾರಣಾ ಕ್ರಮಗಳ ಬಗ್ಗೆ ತಿಳಿಯೋಣ.

## 6.1 ಅನಕ್ಷರತೆ:

ಭಾರತದ ಪ್ರಗತಿಗೆ ಅನಕ್ಷರತೆಯು ಪ್ರಮುಖ ಸಾಮಾಜಿಕ ಕಾರಣ ಹಾಗೂ ಸಮಸ್ಯೆ ಎಂದು ಭಾವಿಸಲಾಗಿದೆ. ಯುನೆಸ್ಕೋ ವ್ಯಾಖ್ಯಾನದ ಪ್ರಕಾರ ವ್ಯಕ್ತಿಯು ನಿತ್ಯ ಜೀವನದಲ್ಲಿ ಸರಳ ವಾಕ್ಯ ರಚಿಸುವ, ಓದುವ ಹಾಗು ಬರೆಯುವ ಕೌಶಲ್ಯ ಇಲ್ಲದಿರುವುದೇ ಅನಕ್ಷರತೆ.

1991 ರ ಭಾರತದ ಜನಗಣತಿ ಆಯೋಗವು ವಿವರಿಸುವಂತೆ, ಓದು ಕಲಿಯುವುದರ ಜೊತೆಗೆ ಭಾರತದ ಯಾವುದಾದರೂ ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳುವವನನ್ನು ಅಕ್ಷರಸ್ಥ ಎಂದು ಕರೆಯಲಾಗುತ್ತದೆ. ಯಾವ ವ್ಯಕ್ತಿಗೆ ಓದಲು ಮತ್ತು ಬರೆಯಲು ಸಾಧ್ಯವಿಲ್ಲವೋ ಅವರನ್ನು ಅನಕ್ಷರಸ್ಥರೆಂದು ಕರೆಯಲಾಗುತ್ತದೆ.

2011 ರ ಜನಗಣತಿ ಪ್ರಕಾರ ಭಾರತದಲ್ಲಿ ಶೇ. 35.2 ಜನ ಅನಕ್ಷರಸ್ಥರಿದ್ದಾರೆ. ಅನಕ್ಷರತೆಯ ಪ್ರಮಾಣವನ್ನು ಗಮನಿಸಿದಾಗ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಆದಿವಾಸಿ ಜನಾಂಗ ಹಾಗೂ ಮಹಿಳೆಯರು ಅನಕ್ಷರಸ್ಥ ಗುಂಪಿನಲ್ಲಿದ್ದಾರೆ.

ಅನಕ್ಷರತೆಗೆ ಅನೇಕ ಕಾರಣಗಳಾಗಿವೆ. ಅವುಗಳಲ್ಲಿ ಪ್ರಮುಖವಾಗಿ ಜನಸಂಖ್ಯಾಸ್ಫೋಟ, ನಿಷ್ಕ್ರಿಯ ಪ್ರಾಥಮಿಕ ಶಿಕ್ಷಣ ವ್ಯವಸ್ಥೆ, ಬಾಲ ಕಾರ್ಮಿಕ ಸಮಸ್ಯೆ, ರಾಷ್ಟ್ರೀಯ ಶಿಕ್ಷಣ ನೀತಿಯ ಕೊರತೆಗಳು ಹಾಗೂ ಇನ್ನೂ ಹಲವಾರು.

ಇದರಿಂದಾಗಿ ಬಡವರು, ರೈತರು, ಕಾರ್ಮಿಕರು, ಮಹಿಳೆಯರು ಮತ್ತು ಅಲ್ಪಸಂಖ್ಯಾತರಲ್ಲಿ ಹೆಚ್ಚು ಅನಕ್ಷರತೆ ಕಂಡುಬರುತ್ತದೆ.

## 6.2 ಬಡತನ ಮತ್ತು ಜೀತ ಪದ್ಧತಿ:

ಬಡತನವು ಬ್ರಿಟೀಷರ ಕಾಲದಿಂದಲೂ ಕಂಡುಬರುತ್ತಿರುವ ಪ್ರಮುಖ ಸಾಮಾಜಿಕ ಸಮಸ್ಯೆಯಾಗಿದೆ. ಪ್ರಾಥಮಿಕ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲಾಗದ ಜೀವನಪರಿಸ್ಥಿತಿಯೇ ಬಡತನ ಆಗಿದೆ. ಬಡತನದ ಪ್ರಮಾಣವನ್ನು ಅಳೆಯುವ ಮಾನದಂಡಗಳೆಂದರೆ ಆಹಾರ, ವಸತಿ, ವೈದ್ಯಕೀಯ ಸೌಲಭ್ಯಗಳು, ಪ್ರಾಥಮಿಕ ಶಿಕ್ಷಣ ಮತ್ತು ಸಾರಿಗೆ ಸೌಲಭ್ಯ, ಸಮಾಜಶಾಸ್ತ್ರಜ್ಞರು ಬಡತನಕ್ಕೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕಾರಣಗಳನ್ನು ಗುರುತಿಸುತ್ತಾರೆ.

### *1. ಸಾಮಾಜಿಕ ಕಾರಣಗಳು:*

ಜಾತಿ ಪದ್ಧತಿ, ಲಿಂಗ ತಾರತಮ್ಯ, ಕೋಮುವಾದ ಮತ್ತು ಪ್ರಾಂತೀಯತೆ ಹಾಗೂ ಮತೀಯತೆ ಇವುಗಳು ನೇರವಾಗಿ ಸಾಮಾಜಿಕ ಬಡತನಕ್ಕೆ ಕಾರಣವಾಗಿದೆ. ಜಾತಿ ಪದ್ಧತಿಯು ದಲಿತ ಹಾಗೂ ಹಿಂದುಳಿದ ಸಮುದಾಯಗಳನ್ನು ನ್ಯಾಯವಾಗಿ ದೊರಕಬೇಕಾದ ನೈಸರ್ಗಿಕ ಸಂಪತ್ತಿನಿಂದ ವಂಚಿಸಿದೆ. ಪುರೋಹಿತಶಾಹಿ ಮತ್ತು ಪ್ರಬಲ ಜಾತಿಗಳು ಅಸಂಖ್ಯಾತ ಜಾತಿ ಸಮುದಾಯಗಳನ್ನು ಭೂಒಡೆತನದಿಂದ ದೂರವಿಟ್ಟವು. ಪರಿಣಾಮವಾಗಿ ಭೂರಹಿತ ಸಮುದಾಯಗಳು ನಿರಂತರವಾದ ಬಡತನದಲ್ಲಿ ನರಳುವಂತಾಯಿತು. ಸ್ವಾತಂತ್ರ್ಯಾನಂತರವೂ ಪರಿಸ್ಥಿತಿ ಬದಲಾಗದೇ ಹಾಗೆಯೇ ಉಳಿದುಕೊಂಡು ಬಂದಿದೆ. ಇದರ ಜೊತೆಗೆ ಕೋಮುವಾದವೂ ಅಲ್ಪಸಂಖ್ಯಾತ ಸಮುದಾಯಗಳನ್ನು ನಾಗರಿಕ ಅವಕಾಶಗಳಿಂದ ವಂಚಿಸಿ ಅವರನ್ನು ಬಡತನದಲ್ಲಿಯೇ ಉಳಿಯುವಂತೆ ಮಾಡಿದೆ. ಪ್ರಾಂತೀಯವಾದದ ಪ್ರಾಬಲ್ಯದಿಂದಾಗಿ ಬಡತನ ರೇಖೆಯ ಪ್ರಮಾಣವು ಈ ಪ್ರದೇಶಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ.

### *2. ಆರ್ಥಿಕ ಕಾರಣಗಳು:*

ಬ್ರಿಟೀಷರ ಆಡಳಿತವು ಭಾರತದ ಗೃಹಕೈಗಾರಿಕೆಗಳನ್ನು ನಾಶಮಾಡಿದ್ದರಿಂದ ಬಡತನದ ಪ್ರಮಾಣವು ಹೆಚ್ಚಾಯಿತು. ಸ್ವಾತಂತ್ರ್ಯಾನಂತರ ಕೈಗಾರಿಕೀಕರಣ ಮತ್ತು ಕೃಷಿಯ ನಡುವಿನ ಸಮತೋಲನವನ್ನು ಕಾಯ್ದುಕೊಳ್ಳಲು ನಮ್ಮ ಸರ್ಕಾರಗಳು ವಿಫಲವಾದವು. ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗಾಗಿ ಹಮ್ಮಿಕೊಂಡ ಕಾರ್ಯಕ್ರಮಗಳು ಆಡಳಿತದ ಭ್ರಷ್ಟಾಚಾರ ಮತ್ತು ಅವೈಜ್ಞಾನಿಕ ಯೋಜನೆಗಳಿಂದ ಜಾರಿಗೆ ಬರಲಿಲ್ಲ. ಇದರಿಂದ ಬಡತನದ ಪ್ರಮಾಣವು ಹೆಚ್ಚಾಗುತ್ತಿದೆ.

1992 ರಲ್ಲಿ ಭಾರತವು ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ನೀತಿಗಳನ್ನು ಅಳವಡಿಸಿಕೊಂಡಿತು. ಈ ನೀತಿಯಿಂದಾಗಿ ಕೃಷಿಕ್ಷೇತ್ರವು ಬಹುರಾಷ್ಟ್ರೀಯ ಕಂಪನಿಗಳ ಹಿಡಿತಕ್ಕೆ ಸಿಕ್ಕಿ ರೈತರು ತಮ್ಮ ಲಾಭವನ್ನು ಪೂರ್ಣವಾಗಿ ಬೀಜ ಮತ್ತು ಗೊಬ್ಬರಗಳಿಗೆ ನೀಡುವಂತಾಯಿತು. ಇದು ರೈತರ ಆತ್ಮಹತ್ಯೆಗಳಿಗೆ ಕಾರಣವಾಯಿತು.

### *3. ರಾಜಕೀಯ ಕಾರಣಗಳು:*

ಬಡತನವನ್ನು ಹೋಗಲಾಡಿಸಲು ಇರುವ ಯೋಜನೆಗಳನ್ನು ಪರಿಣಾಮಕಾರಿಯಾಗಿ ಜಾರಿಗೆ ತರುವ ಇಚ್ಛಾಶಕ್ತಿ ಸರ್ಕಾರದಲ್ಲಿ ಇರದ ಕಾರಣ ವಿಫಲವಾದವು. ಸರ್ಕಾರವು ಬಹುರಾಷ್ಟ್ರೀಯ ಕಂಪನಿ ಪ್ರೇರಿತ ಬಂಡವಾಳಶಾಹಿ ನೀತಿಯನ್ನು ಪ್ರೇರೇಪಿಸುತ್ತಿವೆ. ಉದಾಹರಣೆಗೆ: ವಿಶೇಷ ಆರ್ಥಿಕ ವಲಯಗಳ ರಚನೆಗಳಿಂದ ಉಂಟಾಗುವ ಸಾಮಾಜಿಕ ಪರಿಣಾಮಗಳನ್ನು ಊಹಿಸಲೂ ಅಸಾಧ್ಯ. ಗ್ರಾಮೀಣ ಪ್ರದೇಶದಿಂದ ವಲಸೆಗಳು ಹೆಚ್ಚಾಗುವ ಸಾಧ್ಯತೆಗಳಿವೆ.

### 6.3 ಮಹಿಳೆಯರ ಮೇಲಿನ ದೌರ್ಜನ್ಯ:

ಭಾರತೀಯ ಮಹಿಳೆಯರು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ಪುರುಷ ಪ್ರಧಾನ ಸಮಾಜವು ಎಸಗುತ್ತಿರುವ ದೌರ್ಜನ್ಯವೂ ಕೂಡ ಒಂದು. ಮಹಿಳೆಯರ ಮೇಲಿನ ದೌರ್ಜನ್ಯವು ಚಾರಿತ್ರಿಕವಾಗಿ ಉಳಿದು ಬೆಳೆದು ಬಂದಿರುವ ಸಮಸ್ಯೆ. ಶೈಕ್ಷಣಿಕ, ಆರ್ಥಿಕ, ರಾಜಕೀಯ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಸ್ತ್ರೀಯರ ಮೇಲೆ ಹಿಂಸಾಚಾರಗಳು ನಡೆಯುತ್ತಲೇ ಇದೆ. ಭಾರತ ಸಂವಿಧಾನದ ಪ್ರಸ್ತಾವನೆಯಲ್ಲಿ ಮಹಿಳೆಯರಿಗೂ ಮತ್ತು ಪುರುಷರಿಗೂ ಸಮಾನ ಹಕ್ಕುಗಳನ್ನು ನೀಡಿದರೂ ಸಹ ಮಹಿಳೆಯರ ಮೇಲಿನ ದೌರ್ಜನ್ಯವು ಕಡಿಮೆಯಾಗಿಲ್ಲ. ವರದಕ್ಷಿಣೆ ಕಿರುಕುಳ, ಲೈಂಗಿಕ ದುರುಪಯೋಗ, ಅಸಭ್ಯ ವರ್ತನೆ, ವೃದ್ಧೆಯರ ಅಭದ್ರತೆ ಇವುಗಳನ್ನು ಕೌಟುಂಬಿಕ ಹಾಗೂ ಸಾಮಾಜಿಕ ನೆಲೆಗಟ್ಟಿನಲ್ಲಿ ಗುರುತಿಸಬಹುದು. ಹೆಂಡತಿ ಅಥವಾ ಸೊಸೆಯನ್ನು ಭ್ರೂಣ ಹತ್ಯೆಗೆ ಒತ್ತಾಯಿಸುವುದು, ಸಾರ್ವಜನಿಕ ಸ್ಥಳಗಳಲ್ಲಿ ಮತ್ತು ಖಾಸಗಿಯಾಗಿ ಅಸಭ್ಯ ವರ್ತನೆ, ಮಹಿಳೆಗೆ ಆಸ್ತಿ ಪಾಲು ನಿರಾಕರಣೆ, ವೇಶ್ಯಾವಾಟಿಕೆ ಹಾಗೂ ಆಸಿಡ್ ಎರಚಿ ಹಲ್ಲೆ ನಡೆಸುವುದು ಮಹಿಳಾ ದೌರ್ಜನ್ಯದ ನಾನಾ ರೂಪಗಳಾಗಿವೆ.

*ವರದಕ್ಷಿಣೆ:*

'ವರದಕ್ಷಿಣೆ' ಎಂದರೆ ವಿವಾಹದ ಸಮಯದಲ್ಲಿ ಉಡುಗೊರೆಯಾಗಿ ವಧುವಿನ ಕುಟುಂಬದವರಿಂದ ನಾನಾ ರೂಪದಲ್ಲಿ ಅಪೇಕ್ಷಿಸಲಾಗುವ ಸ್ವತ್ತು, ಚಿನ್ನಾಭರಣ, ನಗದು ಅಥವಾ ವಾಹನ ಇತ್ಯಾದಿಗಳು ವರದಕ್ಷಿಣೆಯ ರೂಪಗಳಾಗಿರುತ್ತವೆ. ವರದಕ್ಷಿಣೆ ಕೊಡುವುದು ಹಾಗೂ ತೆಗೆದುಕೊಳ್ಳುವುದು ಶಿಕ್ಷಾರ್ಹ ಅಪರಾಧ. ವರದಕ್ಷಿಣೆಯ ಕಾರಣದಿಂದ ಸ್ತ್ರೀಯರ ಮೇಲೆ ದೌರ್ಜನ್ಯವೆಸಗಲಾಗುತ್ತಿದೆಯಲ್ಲದೆ ಅವರನ್ನು ಶೋಷಣೆ, ಕೊಲೆ ಹಾಗೂ ಹಿಂಸೆಗಳಿಗೆ ಒಳಪಡಿಸಲಾಗುತ್ತಿದೆ.

**ವರದಕ್ಷಿಣೆಯ ದುಷ್ಪರಿಣಾಮಗಳು:**

ವರದಕ್ಷಿಣೆ ಸ್ತ್ರೀಯರ ಸ್ವಾಭಿಮಾನ, ಗೌರವ, ಸ್ಥಾನ-ಸ್ಥಾನಮಾನವನ್ನು ಕುಗ್ಗಿಸುತ್ತದೆ. ಕೌಟುಂಬಿಕ ಕಲಹವೇರ್ಪಡುತ್ತದೆ. ಸ್ತ್ರೀ-ಪುರುಷರ ನಡುವೆ ಒಡಕು ಉಂಟಾಗಲು ಕಾರಣವಾಗಿದೆ, ಅನೈತಿಕತೆ ಮತ್ತು ಕ್ರೌರ್ಯ ಹೆಚ್ಚುತ್ತದೆ.

**ಪರಿಹಾರೋಪಾಯಗಳು:**

ವರದಕ್ಷಿಣೆಯ ಪಿಡುಗನ್ನು ನಿವಾರಣೆ ಮಾಡಲು ಭಾರತ ಸರ್ಕಾರವು 1961 ರಲ್ಲಿ ವರದಕ್ಷಿಣೆ ನಿಷೇಧ ಕಾಯಿದೆಯನ್ನು ಜಾರಿಗೊಳಿಸಿದೆ. ಈ ಕಾಯ್ದೆಯನ್ನು 1986 ರಲ್ಲಿ ತಿದ್ದುಪಡಿ ಮಾಡಿ ಮತ್ತಷ್ಟು ಬಿಗಿಗೊಳಿಸಲಾಗಿದೆ. ವರದಕ್ಷಿಣೆ ಸಾವು ಪ್ರಕರಣವನ್ನು 'ಭಾರತ ದಂಡ ಸಂಹಿತೆ ಹಾಗೂ ಭಾರತ ಅಪರಾಧ ವಿಚಾರಣಾ ಸಂಹಿತೆಗೆ' ಸೇರ್ಪಡೆಗೊಳಿಸಲಾಗಿದೆ. ಈ ವಿಚಾರಣೆಯನ್ನು ಜಾಮೀನು ರಹಿತ ಮತ್ತು ರಾಜಿರಹಿತ ನೆಲೆಯಲ್ಲಿ ನಡೆಸಬಹುದಾಗಿದೆ. ಮಹಿಳಾ ದೌರ್ಜನ್ಯವನ್ನು ತಡೆಗಟ್ಟಲು ನಿರಂತರವಾದ ಪ್ರಯತ್ನದ ಅಗತ್ಯವಿದೆ. ಪುರುಷ ಪ್ರಧಾನ ಮೌಲ್ಯಗಳನ್ನು ಹಂತಹಂತವಾಗಿ ದುರ್ಬಲಗೊಳಿಸಿ ಮಹಿಳೆಯ ಹಕ್ಕುಗಳನ್ನು ಸದೃಢಗೊಳಿಸಬೇಕಾಗುತ್ತದೆ. ಮಹಿಳಾ ಶಿಕ್ಷಣ ಹಾಗೂ ಉದ್ಯೋಗದ ಜೊತೆಗೆ ಮಕ್ಕಳಾ ಪೋಷಣಾ ಕೇಂದ್ರಗಳನ್ನು ತೆರೆಯಬೇಕಾಗುತ್ತದೆ. ನ್ಯಾಯ ವ್ಯವಸ್ಥೆಗೆ ಲಿಂಗ ಸಂವೇದನೆಯನ್ನು ಮೂಡಿಸುವ ಅಗತ್ಯವಿದೆ. ಲಿಂಗ ಸಮಾನತೆಯ ಪ್ರಚಾರ, ಉಚಿತ ಕಾನೂನಿನ ನೆರವು, ಅಪಾಯದ ಸಂದರ್ಭದಲ್ಲಿ ತುರ್ತು ರಕ್ಷಣಾ ಕ್ರಮ ಕೈಗೊಳ್ಳಲು ತರಬೇತಿ ಹೊಂದಿದ ಸಾಮಾಜಿಕ ಸೈನ್ಯದ ಅವಶ್ಯಕತೆ, ಹಾಗೂ ಕೊನೆಯದಾಗಿ ಇಡೀ ಭಾರತೀಯ ಸಮಾಜಕ್ಕೆ ಸಾಂಸ್ಕೃತಿಕ ವಾಗಿ, ಸಾಮಾಜಿಕವಾಗಿ ದೊಡ್ಡ ಪ್ರಮಾಣದಲ್ಲಿ ಲಿಂಗ ಸಂವೇದನೆಯನ್ನು ಮೂಡಿಸುವ ಅಗತ್ಯವಿದೆ.

## *ಹೆಣ್ಣು ಭ್ರೂಣ ಹತ್ಯೆ ಮತ್ತು ಹೆಣ್ಣು ಶಿಶುಹತ್ಯೆ*

ಆಧುನಿಕ ಸ್ವತಂತ್ರ ಭಾರತದ ಸ್ತ್ರೀಯರು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಹೆಣ್ಣು ಭ್ರೂಣ ಹತ್ಯೆ ಮತ್ತು ಹೆಣ್ಣು ಶಿಶುಹತ್ಯೆ ಕೂಡ ಅಮಾನವೀಯ ಪದ್ಧತಿಯಾಗಿದೆ.

ಗರ್ಭದಲ್ಲಿರುವ ಭ್ರೂಣವು ಹೆಣ್ಣು ಭ್ರೂಣವಾಗಿದ್ದು, ಅದು ತಂದೆ ತಾಯಿಯರಿಗೆ ಬೇಡವಾದರೆ ಅದನ್ನು ಗರ್ಭದಲ್ಲಿಯೇ ಕೊಂದು ಹಾಕುವುದೇ ಹೆಣ್ಣು ಭ್ರೂಣಹತ್ಯೆ. ಆಧುನಿಕ ವೈದ್ಯಕೀಯ ಕ್ಷೇತ್ರದಲ್ಲಿರುವ ಪರೀಕ್ಷಾ ವಿಧಾನಗಳಿಂದ ತಾಯಿಯ ಗರ್ಭದಲ್ಲಿರುವ ಭ್ರೂಣದ ಲಿಂಗವನ್ನು ಪತ್ತೆಹಚ್ಚಲು ಇಂದು ಸಾಧ್ಯವಾಗಿದೆ. ಗಂಡು ಮಕ್ಕಳ ಬಯಕೆಯ ವ್ಯಾಮೋಹದಿಂದ ಹೆಣ್ಣು ಶಿಶುವನ್ನು ಗರ್ಭದಲ್ಲಿಯೇ ಕೊಂದು ಹಾಕುವ ಪ್ರಕರಣಗಳು ಹೆಚ್ಚುತ್ತಿವೆ. ಬಡತನ, ವರದಕ್ಷಿಣೆಯ ಭೀತಿ, ಅನಕ್ಷರತೆ, ಸ್ತ್ರೀ ವಿರೋಧಿ ನಿಲುವುಗಳು, ಗಂಡುಮಗುವಿನ ಬಯಕೆ ಮುಂತಾದ ಕಾರಣಗಳಿಂದಾಗಿ ಹೆಣ್ಣು ಭ್ರೂಣ ಹತ್ಯೆ ಹೆಚ್ಚಾಗಿದೆ. ಇದರ ಪರಿಣಾಮವಾಗಿ ಸ್ತ್ರೀ ಪುರುಷರ ಲಿಂಗಾನುಪಾತದಲ್ಲಿ ಏರುಪೇರು, ಲಿಂಗ ತಾರತಮ್ಯತೆ, ಹೆಣ್ಣಿನ ಅಪಮೌಲ್ಯೀಕರಣ ಮುಂತಾದ ದುಷ್ಪರಿಣಾಮಗಳುಂಟಾಗುತ್ತವೆ. ಭಾರತ ಸರಕಾರವು ಲಿಂಗ ಪತ್ತೆ ಹಚ್ಚುವುದನ್ನು ನಿಯಂತ್ರಿಸಲು 1994 ರಲ್ಲಿ 'ಪ್ರಸವಪೂರ್ವ ಲಿಂಗ ಪರೀಕ್ಷೆ ಪ್ರತಿಬಂಧಕ ಕಾಯ್ದೆ' ಯನ್ನು ಜಾರಿಗೆ ತರಲಾಯಿತು.

ಜನನದ ನಂತರದಲ್ಲಿ ಹೆಣ್ಣು ಮಗುವನ್ನು ಹತ್ಯೆಮಾಡುವ ಕ್ರೂರ ಪದ್ಧತಿಯೇ ಹೆಣ್ಣು ಶಿಶುಹತ್ಯೆ. ಇಂತಹ ಹೇಯ ಕೃತ್ಯಗಳನ್ನು ತಡೆಗಟ್ಟಲು ಸರ್ಕಾರ ಪ್ರತಿಬಂಧಕ ಕಾಯ್ದೆಗಳನ್ನು ಜಾರಿಗೊಳಿಸಿದೆ. ಹೆಣ್ಣು ಭ್ರೂಣಹತ್ಯೆಹಾಗೂ ಹೆಣ್ಣು ಶಿಶುಹತ್ಯೆಗಳೆರಡು ಶಿಕ್ಷಾರ್ಹ ಅಪರಾಧವಾಗಿದೆ.

## 6.4 ಮದ್ಯಪಾನ ಮತ್ತು ಮಾದಕ ದ್ರವ್ಯ ವ್ಯಸನ:

ಸಮಾಜಶಾಸ್ತ್ರಜ್ಞರ ಪ್ರಕಾರ, ಮದ್ಯಪಾನ ಹಾಗೂ ಮಾದಕದ್ರವ್ಯ ವ್ಯಸನ ಸಾಮಾಜಿಕ ಸಮಸ್ಯೆಯಾಗಿದೆ. ಎಲ್ಲಾ ಔಷಧಿಗಳಲ್ಲಿಯೂ ನಿಗದಿತ ಪ್ರಮಾಣದಲ್ಲಿ ಮದ್ಯ ಮತ್ತು ಮಾದಕ ವಸ್ತುಗಳ ಅಂಶವಿರುವ ರಾಸಾಯನಿಕಗಳನ್ನು ಬಳಸಲಾಗುತ್ತದೆ. ಆದರೆ, ಅವುಗಳನ್ನು ಔಷದೀಯ ಗುಣಗಳಿಗಾಗಿ ಬಳಸದೆ ಉನ್ಮಾದ, ಮನರಂಜನೆ ಮತ್ತು ಉನ್ಮತ್ತತೆಗಾಗಿ ಬಳಸಿದರೆ ಅದು ದುರುಪಯೋಗವಾಗುತ್ತದೆ. ಆಗ ಇದೊಂದು ಸಾಮಾಜಿಕ ಸಮಸ್ಯೆಯಾಗಿ ಪರಿವರ್ತನೆ ಹೊಂದುತ್ತದೆ. ಮದ್ಯಪಾನ ಮತ್ತು ಮಾದಕ ದ್ರವ್ಯ ವಸ್ತುಗಳ ಸೇವನೆಯು ವ್ಯಕ್ತಿಯನ್ನು ದುರ್ಬಲನನ್ನಾಗಿಸುವುದಲ್ಲದೇ, ಆತನ ನರವ್ಯವಸ್ಥೆಯ ಮೇಲೆ ದುಷ್ಪರಿಣಾಮವನ್ನುಂಟುಮಾಡಿ ಆತನ ದೈಹಿಕ ಶಕ್ತಿಯನ್ನು ಕಡಿಮೆ ಮಾಡಿ ನೈತಿಕ ಅಧಃಪತನಕ್ಕೆದೂಡುತ್ತದೆ. ಇದರಿಂದ ವ್ಯಕ್ತಿಯ ಜೊತೆಗೆ ಸಮಾಜವು ಅವನತಿಯ ದಾರಿಯನ್ನು ಹಿಡಿಯುತ್ತದೆ.

ಮಾದಕ ವಸ್ತುಗಳ ಮತ್ತು ಮದ್ಯಪಾನದ ದುರುಪಯೋಗಕ್ಕೆ ಸಮಾಜಶಾಸ್ತ್ರಜ್ಞರು ಕೆಳಕಂಡ ಕಾರಣಗಳನ್ನು ನೀಡುತ್ತಾರೆ. ಅವು ಯಾವುವೆಂದರೆ, ಒತ್ತಡ ಮತ್ತು ಖಿನ್ನತೆ ನಿವಾರಣೆಗಾಗಿ, ಕುತೂಹಲಕ್ಕಾಗಿ, ಏಕತಾನತೆ ನಿವಾರಣೆ, ರೋಮಾಂಚಕಾರಿ ಅನುಭವಕ್ಕಾಗಿ, ಗೆಳೆಯರ ಗುಂಪಿನಲ್ಲಿ ಬೆರೆಯಲು, ನಿದ್ರಾಹೀನತೆಯಿಂದ ಪಾರಾಗಲು, ಒಂಟಿತನವನ್ನು ನೀಗಲು, ವೈಯಕ್ತಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು, ಸಾಮಾಜಿಕ ಅಸ್ಥಿರತೆಯಿಂದ ದೂರಾಗಲು ವ್ಯಕ್ತಿಗಳು ಮಾದಕ ವ್ಯಸನಿಗಳಾಗುತ್ತಾರೆ. ನಿರಂತರವಾದ ಸಾಮಾಜಿಕ ಶಿಕ್ಷಣ, ಜನಜಾಗೃತಿ, ಜನಸಹಭಾಗಿತ್ವದ ಮೂಲಕ ಈ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿದೆ.

### *ಮದ್ಯಪಾನದ ವಿರುದ್ಧ ಪ್ರಚಾರ ಆಂದೋಲನ:*

ಪೂರ್ಣ ಪಾನನಿಷೇಧವನ್ನು ಜಾರಿಗೆ ತರಲು ಒತ್ತಾಯಿಸುವ ಉದ್ದೇಶಗಳನ್ನು ಹೊಂದಿದ ಹಲವಾರು ಚಳುವಳಿಗಳು ದೇಶಾದ್ಯಂತ ನಡೆದಿವೆ. 1995 ರಲ್ಲಿ ಮದ್ಯಪಾನದ ವಿರುದ್ಧ ನಡೆದ ಚಳುವಳಿಯಲ್ಲಿ ಗಾಂಧಿವಾದಿಗಳು ಹಾಗೂ ಯುವ ಸಂಘಟನೆಗಳು ಭಾಗವಹಿಸಿದ್ದವು. ರಾಜ್ಯದ ದಲಿತ ಸಂಘರ್ಷ ಸಮಿತಿ ಹಾಗೂ ರೈತ ಸಂಘಗಳು ನಡೆಸಿದ ಪ್ರಯತ್ನಗಳು ಈ ನಿಟ್ಟಿನಲ್ಲಿ ಗಮನಾರ್ಹ ಚಳುವಳಿಗಳಾಗಿವೆ. ಸರ್ಕಾರವೂ ಕೂಡ ಈ ದಿಸೆಯಲ್ಲಿ ಮಧ್ಯಪಾನ ಸಂಯಮ ಮಂಡಳಿಯ ಕಾರ್ಯಕ್ರಮಗಳ ಮೂಲಕ ಜಾಗೃತಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ.

**ಮಾದಕದ್ರವ್ಯ ವ್ಯಸನ:**

ಈ ವರ್ತಮಾನದ ನಾಗರಿಕ ಸಮಾಜದ ದುರಂತಗಳಲ್ಲಿ ಮಾದಕದ್ರವ್ಯ ವ್ಯಸನವೂ ಒಂದಾಗಿದೆ. ಅಕ್ರಮವಾದ ಮಾದಕ ವಸ್ತುಗಳ ಬಳಕೆ ಅಥವಾ ಶಾರೀರಿಕ ಹಾಗೂ ಮಾನಸಿಕವಾಗಿ ಹಾನಿಯನ್ನುಂಟು ಮಾಡುವ ರೀತಿಯಲ್ಲಿ ರಾಸಾಯನಿಕ ವಸ್ತುಗಳು ಬಳಕೆ ಮಾದಕ ವಸ್ತುಗಳ ದುರ್ಬಳಕೆ. ಶರೀರವು ತನ್ನ ಕಾರ್ಯಗಳನ್ನು ಮುಂದುವರೆಸಿಕೊಂಡು ಹೋಗಬೇಕಾದರೆ ಮಾದಕ ವಸ್ತುಗಳನ್ನು ನಿರಂತರವಾಗಿ ಸೇವಿಸುತ್ತಲೇ ಇರಬೇಕಾದ ಪರಿಸ್ಥಿತಿಗೆ ಮಾದಕದ್ರವ್ಯ ವ್ಯಸನ ಎನ್ನಲಾಗಿದೆ.

**ಮಾದಕದ್ರವ್ಯ ವ್ಯಸನದ ಲಕ್ಷಣಗಳು:**

ನಾಗಲೂ ಸೇವಿಸಬೇಕೆಂಬ ಉತ್ಕಟ ಬಯಕೆ ಪ್ರತಿ

ಕ ವಸ್ತುವಿನ ಪ್ರಮಾಣ ಹೆಚ್ಚಿಸುವ ಬಯಕೆ

ುಯಿಂದ ಉಂಟಾಗುವ ಭ್ರಮೆಯ ಆನಂದ.

ಸಿಕ, ದೈಹಿಕ ಹಾಗೂ ಸಮಾಜದ ಸ್ವಾಸ್ಥ್ಯಕ್ಕೂ ಹಾನಿಕಾರಕ.

ಪ್ರತಿ ವರ್ಷ ಜೂನ್ 26 ರಂದು ಮಾದಕ ವಸ್ತುಗಳ ದುರುಪಯೋಗ ಮತ್ತು ಮಾದಕವಸ್ತುಗಳ ಕಳ್ಳಸಾಗಣೆಯ ವಿರುದ್ಧದ ಅಂತರರಾಷ್ಟ್ರೀಯ ದಿನವನ್ನಾಗಿ ಆಚರಿಸಲಾಗುತ್ತಿದೆ.

*ಮಾದಕವಸ್ತು ವ್ಯಸನಕ್ಕೆ ಕಾರಣಗಳು/ ಪ್ರೇರಕ ಅಂಶಗಳು:*

**ಸಿಕ ಕಾರಣ:** ಮಾದಕ ವಸ್ತುಗಳ ಸೇವನೆಯಿಂದ ಮಾನಸಿಕವಾಗಿ ಹಲವು ಬಗೆಯ ತೃಪ್ತಿಯು ಯುತ್ತದೆ ಎಂಬ ಭ್ರಮಾಲೋಕವು ಒಂದು ಮುಖ್ಯ ಕಾರಣವೆನಿಸಿದೆ.

**ಾಜಿಕ ಕಾರಣ:** ಸಾಮಾಜಿಕ ಅನುಭವಗಳ ಒತ್ತಡವನ್ನು ಕಡಿಮೆ ಮಾಡಿಕೊಳ್ಳುವ, ಸ್ನೇಹಿತರ ಹವು ಕೂಡ ಈ ವ್ಯಸನಕ್ಕೆಪ್ರೇರಣೆಯಾಗಿದೆ.

**ರಿಕ ಕಾರಣ:** ನಿದ್ರೆಗೆಟ್ಟು ಕೆಲಸಮಾಡುವ ಕೆಲವು ಜನರು, ಕೆಲವು ಹಂತದ ವಿದ್ಯಾರ್ಥಿಗಳು, ಈ ಳ ಸೇವನೆಯಲ್ಲಿ ತೊಡಗಬಹುದು.

**ಮಾದಕವಸ್ತುಗಳ ಬಳಕೆಯ ನಿಯಂತ್ರಣ:**

1. **ಶಿಕ್ಷಣ ಮಾದಕವಸ್ತುಗಳ ದುಷ್ಪರಿಣಾಮಗಳ ಬಗ್ಗೆ:** ಉತ್ತಮವಾದ ತಿಳಿವಳಿಕೆಯನ್ನು ನೀಡುವ ಶಿಕ್ಷಣವನ್ನು ರೂಪಿಸಬೇಕು. ಸರ್ಕಾರ, ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳು ಹಾಗೂ ಪೋಷಕರು ಇವುಗಳಲ್ಲಿ ಭಾಗವಹಿಸಬೇಕು.
2. **ಕಾನೂನು ಅನುಷ್ಠಾನ:** ಮಾದಕ ವಸ್ತುಗಳ ಸೇವನೆಯನ್ನು ನಿಯಂತ್ರಿಸುವ ಕಾನೂನನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ವ್ಯವಸ್ಥೆಯಾಗಬೇಕು.

3. **ಪೋಷಕರ ಪಾತ್ರ:** ಮಕ್ಕಳು ತಪ್ಪುದಾರಿ ಹಿಡಿಯುತ್ತಿರುವುದನ್ನು ಗಮನಿಸಿ ಅದನ್ನು ತಪ್ಪಿಸಿ ತಿದ್ದುವ ಕಾರ್ಯದೊಂದಿಗೆ ಮನೆಯಲ್ಲಿ ಒಳ್ಳೆಯ ವಾತಾವರಣವನ್ನು ನಿರ್ಮಾಣ ಮಾಡಿ ಕೊಡುವ ಜವಾಬ್ದಾರಿಯನ್ನು ಪೋಷಕರು ಹೊಂದಿರುತ್ತಾರೆ.

4. **ಶಿಕ್ಷಕರ ಪಾತ್ರ:** ಮಾದಕ ವಸ್ತುಗಳ ದುಷ್ಪರಿಣಾಮಗಳ ಬಗ್ಗೆ ಹಲವಾರು ಸಂದರ್ಭಗಳಲ್ಲಿ, ಅನೌಪಚಾರಿಕವಾಗಿ ವಿದ್ಯಾರ್ಥಿಗಳಿಗೆ ತಿಳುವಳಿಕೆಯನ್ನು ಶಿಕ್ಷಕರು ನೀಡಬಹುದು.

### 6.5 ಧಾರ್ಮಿಕ ಕಲಹ:

ಭಾರತದಲ್ಲಿ ವಿವಿಧ ಧರ್ಮಗಳಿವೆ. ಬೇರೆ ಬೇರೆ ಸಿದ್ಧಾಂತಗಳನ್ನು ನಂಬುವ ಜನರು ದೇವರ ಅಸ್ತಿತ್ವ, ಮುಕ್ತಿ/ ಮೋಕ್ಷ ಪಡೆಯುವ ವಿಧಾನಗಳಲ್ಲಿ, ಸ್ವರ್ಗ-ನರಕಗಳ ಕಲ್ಪನೆ, ಆತ್ಮದ ಸ್ವರೂಪ, ಪುನರ್ಜನ್ಮ, ಮೊದಲಾದ ವಿಷಯಗಳಲ್ಲಿ ಬೇರೆ ಬೇರೆ ನಂಬಿಕೆಗಳನ್ನು ಹೊಂದಿದ್ದಾರೆ, ಪೂಜಾ ಪದ್ಧತಿಗಳು ಅವರವರ ಧರ್ಮಕ್ಕೆ ಅನುಸಾರವಾಗಿ ನಡೆಯುತ್ತವೆ. ಪ್ರತಿಯೊಂದು ಧರ್ಮದ ಅನುಯಾಯಿಗಳು ತಮ್ಮ ಧರ್ಮದ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತಾರೆ. ಜಗತ್ತಿನ ವಿವಿಧ ಧರ್ಮಾವಲಂಬಿಗಳು ತಮ್ಮ ತಮ್ಮ ಧರ್ಮಗಳ ಬಗೆಗೆ ವಿಶ್ವಾಸಗಳನ್ನು ಬೆಳೆಸಿಕೊಂಡಂತೆ ಅನ್ಯಧರ್ಮಗಳ ಬಗೆಗೆ ತಿರಸ್ಕಾರ ಭಾವನೆಯನ್ನು ಬೆಳೆಸಿಕೊಂಡಿದ್ದಾರೆ. ಈ ಭಾವನೆಯೇ ಧಾರ್ಮಿಕ ಕಲಹಗಳಿಗೆ ಕಾರಣವಾಗುತ್ತಿದೆ. ಅನ್ಯ ಧರ್ಮಗಳ ಬಗೆಗಿನ ಸಂದೇಹದ ಪ್ರವೃತ್ತಿ, ಅನ್ಯ ಧರ್ಮೀಯರ ಬಗೆಗಿನ ದ್ವೇಷಾಸೂಯೆ, ಪೂರ್ವಾಗ್ರಹ ಪೀಡೆ ಎರಡು ಧರ್ಮೀಯರ ನಡುವೆ ಕಂದಕವನ್ನು ಉಂಟುಮಾಡುತ್ತದೆ.

**ಕಾರಣಗಳು:**

1. **ಭೌಗೋಳಿಕ ಕಾರಣಗಳು:** ವಿವಿಧ ಭೌಗೋಳಿಕ ನೆಲೆಗಳಲ್ಲಿ ವಾಸಿಸುವ ಬೇರೆ ಬೇರೆ ಧರ್ಮಾವಲಂಬಿ ಜನರ ಮದ್ಯೆ ಸಾಮಾಜಿಕ ಸಂಪರ್ಕಗಳು ನಿಕಟವಾಗಿ ಬೆಳೆದು ಬಂದಿರುವುದಿಲ್ಲ. ಸಹನಶೀಲತೆಯ ಕೊರತೆ ಕಾಣುತ್ತದೆ. ಇದರಿಂದ ಧಾರ್ಮಿಕ ಕಲಹ ಏರ್ಪಡುತ್ತದೆ.

2. **ಮನೋವೈಜ್ಞಾನಿಕ ಕಾರಣಗಳು:** ಧಾರ್ಮಿಕ ಕಲಹಕ್ಕೆ ಮನೋವೈಜ್ಞಾನಿಕ ಕಾರಣವೇ ಅತ್ಯಂತ ಪ್ರಧಾನವಾಗಿದೆ. ಜನರ ಮನಸ್ಸಿನಲ್ಲಿ ಹಲವು ಭ್ರಮೆ ಹಾಗೂ ತಪ್ಪು ಕಲ್ಪನೆ ಮೂಡಿಸುವ ವಿಚಾರಗಳು ಪ್ರಶ್ನೆಗಳನ್ನು ಹುಟ್ಟುಹಾಕುತ್ತವೆ. ಇದರಿಂದ ಅನ್ಯ ಧರ್ಮೀಯರ ಜೊತೆ ಅನ್ಯೋನ್ಯತೆಯ ವಿಷಯದಲ್ಲಿ ಅಡ್ಡಿ ಉಂಟುಮಾಡುತ್ತವೆ. ಇದರ ಪರಿಣಾಮದಿಂದ ಧಾರ್ಮಿಕ ಸಂಘರ್ಷ ಏರ್ಪಡುತ್ತದೆ.

3. **ಸಾಮಾಜಿಕ ಕಾರಣಗಳು:** ಧಾರ್ಮಿಕ ಸಂಪ್ರದಾಯಗಳು, ಆಚರಣೆಗಳು ಪರಸ್ಪರ ವಿರೋಧವಾಗಿರುವುದರಿಂದ ಸಾಮಾಜಿಕ ಅಂತರ ಹೆಚ್ಚುತ್ತದೆ. ಈ ವಿರೋಧಭಾವನೆಗಳು ಸಾಮಾನ್ಯ ವಿಷಯದಲ್ಲಿಯೂ ಕಲಹಗಳನ್ನು ಹುಟ್ಟುಹಾಕುತ್ತವೆ.

**ನಿವಾರಣಾ ಕ್ರಮಗಳು:**

ಸೌಹಾರ್ದಯುತ ಭಾವನೆ ಬೆಳೆಸುವುದು. ಪೂರ್ವಗ್ರಹಗಳನ್ನು ತೊಡೆದು ಹಾಕುವಂತಹ ಶಿಕ್ಷಣ ನೀಡುವುದು, ಸಹನಶೀಲತೆ, ವಿವೇಕ ಹಾಗೂ ಹೃದಯ ವೈಶಾಲ್ಯದಿಂದ ಒಳ್ಳೆಯದನ್ನು ಮೆಚ್ಚಿಕೊಳ್ಳುವದನ್ನು ಕಲಿಯಬೇಕೆಂಬ ತಾತ್ವಿಕ ನಿಲುವನ್ನು ಜನರಲ್ಲಿ ನೆಲೆಗೊಳಿಸುವುದು, ಅನ್ಯಮತಗಳನ್ನು ತಿಳಿದುಕೊಳ್ಳುವ ಮನೋಭಾವವನ್ನು ಪ್ರೇರೆಪಿಸುವುದು ಇವೇ ಮೊದಲಾದ ಕ್ರಮಗಳಿಂದ ಧಾರ್ಮಿಕ ಸಂಘರ್ಷವನ್ನು ನಿವಾರಿಸಬಹುದು.

1. ರಾಷ್ಟ್ರೀಯ ಚರಿತ್ರೆಯನ್ನು ಪ್ರಚುರಪಡಿಸುವುದು.
2. ಸಾಮಾಜಿಕ ಸಂಪರ್ಕವನ್ನು ಹೆಚ್ಚಿಸಿಕೊಳ್ಳುವುದು.
3. ಕೋಮುತತ್ವಗಳ ತತ್ವವನ್ನು ಆಧರಿಸಿದ ಸಂಘಟನೆಗಳನ್ನು ಕಡೆಗಾಣಿಸುವುದು.
4. ಆರೋಗ್ಯಮಯ ಪ್ರಜಾಭಿಪ್ರಾಯವನ್ನು ರೂಪಿಸುವುದು.
5. ರಾಷ್ಟ್ರೀಯ ಹಬ್ಬಗಳು, ಆಚರಣೆಗಳಿಗೆ ಹೆಚ್ಚಿನ ಪ್ರಾಧಾನ್ಯತೆ ನೀಡುವುದು.

## ಸಾರಾಂಶ

1. 1991 ರ ಭಾರತದ ಜನಗಣತಿ ಆಯೋಗವು ವಿವರಿಸುವಂತೆ, ಓದು ಬರೆಯುವುದರ ಜೊತೆಗೆ ಭಾರತದ ಯಾವುದಾದರೂ ಒಂದು ಭಾಷೆಯನ್ನು ಅರ್ಥಮಾಡಿಕೊಳ್ಳುವವನನ್ನು ಅಕ್ಷರಸ್ಥ ಎಂದು ಕರೆಯಲಾಗುತ್ತದೆ.
2. 2011 ರ ಜನಗಣತಿ ಪ್ರಕಾರ ಭಾರತದಲ್ಲಿ ಶೇ. 35.2 ಜನ ಅನಕ್ಷರಸ್ಥರಿದ್ದಾರೆ.
3. ಜಾತಿ ಪದ್ಧತಿ, ಲಿಂಗ ತಾರತಮ್ಯ, ಕೋಮುವಾದ ಮತ್ತು ಪ್ರಾಂತೀಯತೆ ಹಾಗೂ ಮತೀಯತೆ ಇವುಗಳು ನೇರವಾಗಿ ಸಾಮಾಜಿಕ ಬಡತನಕ್ಕೆ ಕಾರಣವಾಗಿದೆ.
4. 1992 ರಲ್ಲಿ ಭಾರತವು ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ ನೀತಿಗಳನ್ನು ಅಳವಡಿಸಿಕೊಂಡಿತು.
5. 'ವರದಕ್ಷಿಣೆ' ಎಂದರೆ ವಿವಾಹದ ಸಂದರ್ಭದಲ್ಲಿ ಉಡುಗೊರೆಯಾಗಿ ವಧುವಿನ ಕುಟುಂಬದವರಿಂದ ವರನ ಕಡೆಯವರು ನಾನಾ ರೂಪದಲ್ಲಿ ಅಪೇಕ್ಷಿಸಲಾಗುವ ಸ್ವತ್ತು, ಚಿನ್ನಾಭರಣ, ನಗದು ಅಥವಾ ವಾಹನ ಇತ್ಯಾದಿಗಳು ವರದಕ್ಷಿಣೆಯ ರೂಪಗಳಾಗಿರುತ್ತವೆ.
6. ಭಾರತ ಸರ್ಕಾರವು 1961 ರಲ್ಲಿ ವರದಕ್ಷಿಣೆ ನಿಷೇಧ ಕಾಯಿದೆಯನ್ನು ಜಾರಿಗೊಳಿಸಿದೆ.

7. ಭಾರತ ಸರಕಾರವು ಲಿಂಗ ಪತ್ತೆ ಹಚ್ಚುವುದನ್ನು ನಿಯಂತ್ರಿಸಲು 1994 ರಲ್ಲಿ 'ಪ್ರಸವಪೂರ್ವ ಲಿಂಗ ಪರೀಕ್ಷೆ ಪ್ರತಿಬಂಧಕ ಕಾಯ್ದೆ' ಯನ್ನು ಜಾರಿಗೆ ತರಲಾಯಿತು.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. ಪ್ರಜಾಪ್ರಭುತ್ವದ ಅಳಿವು-ಉಳಿವು _______ಯನ್ನಾಧರಿಸಿದೆ.
2. ಪ್ರಾಥಮಿಕ ಅವಶ್ಯಕತೆಗಳನ್ನು ಈಡೇರಿಸಿಕೊಳ್ಳಲಾಗದ ಪರಿಸ್ಥಿತಿಯೇ _______ .
3. ಲಿಂಗ ಪತ್ತೆ ಹಚ್ಚುವುದನ್ನು ನಿಯಂತ್ರಿಸಲು 1994 ರಲ್ಲಿ _______ ಕಾಯ್ದೆಯನ್ನು ಜಾರಿಗೆ ತರಲಾಯಿತು.
4. ವರದಕ್ಷಿಣೆ ಕೊಡುವುದು ಹಾಗೂ ತೆಗೆದುಕೊಳ್ಳುವುದು _______ ಅಪರಾಧ.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಅಕ್ಷರಸ್ಥರ ಅರ್ಥವನ್ನು ತಿಳಿಸಿ.
2. ಮಹಿಳೆಯರ ಮೇಲಿನ ದೌರ್ಜನ್ಯವನ್ನು ತಿಳಿಸಿ.
3. ಪ್ರಸವ ಪೂರ್ವ ಲಿಂಗ ಪರೀಕ್ಷೆ ಪ್ರತಿಬಂಧಕ ಕಾಯ್ದೆ ಯಾವ ವರ್ಷದಲ್ಲಿ ಜಾರಿಗೆ ಬಂದಿತು?
4. 2011 ರ ಜನಗಣತಿಯ ಪ್ರಕಾರ ಭಾರತದಲ್ಲಿ ಅನಕ್ಷರಸ್ಥರ ಸಂಖ್ಯೆ ಎಷ್ಟು?

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

1. ಅನಕ್ಷರತೆಗೆ ಪ್ರಮುಖ ಕಾರಣಗಳಾವುವು?
2. ಧಾರ್ಮಿಕ ಕಲಹಕ್ಕೆ ಭೌಗೋಳಿಕ ಕಾರಣಗಳೇನು?
3. ಮಾದಕ ದ್ರವ್ಯಗಳು ಸಮಾಜಕ್ಕೆ ಹೇಗೆ ಮಾರಕವಾಗಿದೆ. ತಿಳಿಸಿ
4. ಬಡತನದ ಪ್ರಮಾಣವನ್ನು ಅಳೆಯಲು ಮಾನದಂಡಗಳು ಯಾವುವು?

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ವರದಕ್ಷಿಣೆಯ ಪಿಡುಗನ್ನು ನಿವಾರಣೆ ಮಾಡಲು ಭಾರತ ಸರ್ಕಾರವು ಕೈಗೊಂಡಿರುವ ಕ್ರಮಗಳೇನು?
2. ಬಡತನಕ್ಕೆ ಸಾಮಾಜಿಕ ಕಾರಣಗಳನ್ನು ಪಟ್ಟಿ ಮಾಡಿ.

**ಸಲಹಾತ್ಮಕ ಚಟುವಟಿಕೆಗಳು:**

1. ಪ್ರಜಾಪ್ರಭುತ್ವದ ಯಶಸ್ಸು ಹಾಗೂ ಶಿಕ್ಷಿತ ಸಮುದಾಯ- ಒಂದು ಚರ್ಚಾಕೂಟವನ್ನು ಏರ್ಪಡಿಸಿ.
2. ಮಹಿಳಾ ದೌರ್ಜನ್ಯದ ಬಗ್ಗೆ ವೃತ್ತ ಪತ್ರಿಕೆಗಳಿಂದ ವಿಷಯ ಸಂಗ್ರಹಿಸಿ.
3. ಸಣ್ಣ ಹಾಗೂ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರದ ಕಾರ್ಯಕ್ರಮಗಳನ್ನು ನಿಮ್ಮ ಶಿಕ್ಷಕರಿಂದ ಕೇಳಿ ತಿಳಿದುಕೊಳ್ಳಿ

## ಅಧ್ಯಾಯ- 7 ಭಾರತೀಯ ಸಂವಿಧಾನ ಮತ್ತು ಅಸಮಾನತೆ (Indian Constitution and Inequality)

**ಕಲಿಕಾಂಶಗಳು**

1. ಭಾರತೀಯ ಸಮಾಜದಲ್ಲಿ ಅಸಮಾನತೆಯ ರೀತಿ-ನೀತಿಯ ಬಗ್ಗೆ ತಿಳಿಯೊಣ.
2. ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ನೀಡಿರುವ ಸೌಲಭ್ಯಗಳು ಯಾವುವು ಎಂಬುದನ್ನು ತಿಳಿಯೋಣ.
3. ಮಹಿಳೆಯರ ಸಬಲೀಕರಣ ಮತ್ತು ಕಾನೂನುಗಳ ಬಗ್ಗೆ ಅರ್ಥಮಾಡಿಕೊಳ್ಳೋಣ.
4. ಲೈಂಗಿಕ ಅಲ್ಪಸಂಖ್ಯಾತರು ಎಂದರೆ ಯಾರು ಎಂಬ ಬಗ್ಗೆ ಮಾಹಿತಿ ಕಲೆಹಾಕೋಣ.

### 7.1 ಪೀಠಿಕೆ:

ಮೀನಾಳ ತಂದೆ ದೊಡ್ಡ ಜಮೀನ್ದಾರರು ಮೀನಾ ಪ್ರತಿದಿನ ಕಾರಿನಲ್ಲಿ ಶಾಲೆಗೆ ಬರುತ್ತಾಳೆ. ರಮ್ಯಾ ಮೀನಾಳ ಸ್ನೇಹಿತೆ ಆದರೆ ಅವರ ತಂದೆ ಕೂಲಿ ಮಾಡುತ್ತಾರೆ, ರಮ್ಯಾ ಪ್ರತಿದಿನ ಶಾಲೆಗೆ ನಡೆದೇ ಬರುತ್ತಾಳೆ ಅಂದರೆ ಶ್ರೀಮಂತರ ಬಳಿ ಹಣ, ಕಾರು, ಬಂಗಲೆ ಎಲ್ಲಾ ಇರುತ್ತದೆ ಅದೇ ಬಡವರಿಗೆ ಎರಡು ಹೊತ್ತಿನ ಊಟಕ್ಕೂ ಕಷ್ಟ. ಇದು ಅಸಮಾನತೆಯ ರೂಪಕ್ಕೆ ಉದಾಹರಣೆ. ಅಸಮಾನತೆ ಎಂದರೆ ಸಮಾಜದಲ್ಲಿ ಸಂಪತ್ತು ಮತ್ತು ಸೌಲಭಗಳ ಅಸಮಾನ ಹಂಚಿಕೆ ಇದು ಎಲ್ಲಾ ಸಮಾಜಗಳಲ್ಲಿಯೂ ಒಂದಲ್ಲಾ ಒಂದು ರೀತಿಯಲ್ಲಿ ಕಂಡುಬರುತ್ತದೆ.

ಮೀನಾಳ ಬಳಿ ಬೆಲೆ ಬಾಳುವ ಹೊಸ ಪುಸ್ತಕ, ಪೆನ್, ಶೂ, ಬಟ್ಟೆಗಳು, ಆಟದ ಸಾಮಾನುಗಳು ಇದ್ದರೆ, ರಮ್ಯಾಳ ಬಳಿ ಇರುವುದು ಬೇರೆಯವರು ಉಪಯೋಗಿಸಿ ದಾನ ಮಾಡಿದ ವಸ್ತುಗಳು ಮೀನಾಳ ತಂದೆ ಶಾಲೆಗೆ ಬಂದರೆ ಮುಖ್ಯ ಶಿಕ್ಷಕರು ಸ್ವತಃ ಬಂದು ಅವರನ್ನು ಮಾತನಾಡಿಸಿ ಕಾರಿನ ವರೆಗೆ ಬಿಡಲು ಬರುತ್ತಾರೆ ಅದೇ ರಮ್ಯಾಳ ತಂದೆ ಬಂದರೆ ಅವರನ್ನು ಮಾತನಾಡಿಸಲು ಸಮಯವಿರುವುದಿಲ್ಲ. ಇದು ಸಾಮಾಜಿಕ ಗೌರವ ಸ್ಥಾನಮಾನಗಳ ಅಸಮಾನತೆ. ಈ ಅಸಮಾನತೆಯನ್ನು ಸಮಾಜದಲ್ಲಿ ಸ್ತರವಿನ್ಯಾಸ ಅಥವಾ ಏಣಿ-ಶ್ರೇಣಿ ವ್ಯವಸ್ಥೆ ಎಂದು ಕರೆಯುತ್ತಾರೆ ಅಂದರೆ ವ್ಯಕ್ತಿಯ ಶಿಕ್ಷಣ, ಉದ್ಯೋಗ, ಸಂಪಾದನೆ ಆಸ್ತಿ ಪಾಸ್ತಿ ಇವುಗಳನ್ನು ಆಧರಿಸಿ ಅವನಿಗೆ ಸಮಾಜವು ಸಾಮಾಜಿಕ ಸ್ಥಾನಮಾನ ಗೌರವಗಳನ್ನು ನೀಡುತ್ತದೆ. ಇಷ್ಟೇ ಅಲ್ಲದೆ ರಾಜಕೀಯ ಅಧಿಕಾರ ಬಲಗಳನ್ನು ಆಧರಿಸಿ ಅವರಿಗೆ ಸೌಲಭ ಮತ್ತು ಅವಕಾಶವನ್ನು ನೀಡುತ್ತದೆ. ಇದರಿಂದ ಹಲವರಿಗೆ ಹೆಚ್ಚು ಅವಕಾಶಗಳು ದೊರೆತು ಅವರು ಸಬಲರಾಗುತ್ತಾರೆ, ಆದರೆ ಕೆಲವರು ಅವಕಾಶ ವಂಚಿತರಾಗಿ ದುರ್ಬಲರಾಗುತ್ತಾರೆ.

ಹಣ ಮತ್ತು ಅಧಿಕಾರವನ್ನು ಬಳಸಿ ಜನರು ಸಮಾಜದ ಎಲ್ಲಾ ಪ್ರಮುಖ ಅವಕಾಶಗಳನ್ನು ತಮ್ಮ ಕೈವಶ ಮಾಡಿಕೊಳ್ಳುತ್ತಾರೆ ಹಾಗೂ ಅವಕಾಶ ವಂಚಿತರು ಅಸಮಾನತೆಯಿಂದ ತಾರತಮ್ಯಕ್ಕೆ ಒಳಗಾಗಿ ಸಾಮಾಜಿಕ ಮುಖ್ಯ ವಾಹಿನಿಯಿಂದ ದೂರ ತಳ್ಳಲ್ಪಡುತ್ತಾರೆ. ಇದನ್ನೆ ವರ್ಗ ವ್ಯವಸ್ಥೆ ಎಂದು ಕರೆಯುತ್ತಾರೆ. ಜಾತಿ ವ್ಯವಸ್ಥೆ ಕುರಿತು ಒಂದು ಉದಾಹರಣೆಯ ಮೂಲಕ ತಿಳಿಯುಬಹುದು.

ಮಕ್ಕಳೇ ಡಾ. ಬಾಬಾ ಸಾಹೇಬ್ ಅಂಬೇಡ್ಕರ್‌ರವರು ವಿದೇಶದಲ್ಲಿ ವಿದ್ಯಾಭ್ಯಾಸ ಮುಗಿಸಿ ಭಾರತದ ಬರೋಡ ನಗರಕ್ಕೆ ಬಂದರು. ಆದರೆ ಬರೋಡ ರೈಲ್ವೆ ನಿಲ್ದಾಣದಲ್ಲಿ ಅವರಿಗೆ ತಂಗಲು ವಸತಿ ಇಲ್ಲದೆ ಯೋಚಿಸುತ್ತಾ ನಿಂತಿದ್ದರು. ಏಕೆಂದರೆ ಬರೋಡದಲ್ಲಿದ್ದ ಯಾವುದೇ ಹೋಟೆಲಿನಲ್ಲಿ ಇವರು ಅಸ್ಪೃಶ್ಯರು ಎಂಬ ಕಾರಣಕ್ಕೆ ತಂಗಲು ಅವಕಾಶ ಕೊಡಲಿಲ್ಲ. ಅವರು ಪಾರ್ಸಿ ಧರ್ಮಿಯರೆಂದು ಹೇಳಿಕೊಂಡು ತಂಗಿದಾಗ ಹಿಂದೂಗಳು ಅವರ ಮೇಲೆ ಹಲ್ಲೆ ಮಾಡುತ್ತಾರೆ ಇದನ್ನು ಸ್ವತಃ ಬಾಬಾ ಸಾಹೇಬ್ ಅಂಬೇಡ್ಕರ್‌ರವರೆ ತಮ್ಮ ಆತ್ಮ ಕಥೆಯಲ್ಲಿ ಬರೆದಿದ್ದಾರೆ. ಇದರಿಂದ ತಿಳಿದು ಬರುವುದೆನೆಂದರೆ ಇಂದಿಗೂ ಕೂಡ ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆ ಆಚರಣೆ ಪದ್ಧತಿಯು ಒಂದಲ್ಲ ಒಂದು ರೀತಿ ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಈ ಅಸಮಾನತೆಯನ್ನು ಹೋಗಲಾಡಿಸಲು ಸಂವಿಧಾನವು ಅನೇಕ ಶಾಸನಾತ್ಮಕ ಪರಿಹಾರಗಳನ್ನು ಕೈಗೊಂಡಿದೆ.

### 7.2 ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಗೆ ನೀಡಿರುವ ಸೌಲಭ್ಯಗಳು:

ಸ್ವಾತಂತ್ರ್ಯನಂತರ ಭಾರತೀಯ ಸಂವಿಧಾನವು ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಅಭಿವೃದ್ಧಿಗಾಗಿ ಅನೇಕ ಸೌಲಭ್ಯಗಳು ಮತ್ತು ರಕ್ಷಣಾತ್ಮಕ ಕ್ರಮಗಳನ್ನು ಸೂಚಿಸಿದೆ. ಇವುಗಳನ್ನು 46 ನೇ ವಿಧಿಯಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಅದರ ಪ್ರಕಾರ ರಾಜ್ಯವು ದುರ್ಬಲ ವರ್ಗಗಳ ವಿಶೇಷವಾಗಿ ಅನುಸೂಚಿತ ಜಾತಿ ಮತ್ತು ಬುಡಕಟ್ಟುಗಳ ಜನತೆಯ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ವಿಶೇಷ ಜಾಗರೂಕತೆಯಿಂದ ವೃದ್ಧಿಗೊಳಿಸತಕ್ಕದ್ದು ಮತ್ತು ಅವರನ್ನು ಸಾಮಾಜಿಕ ಅನ್ಯಾಯ ಹಾಗೂ ಎಲ್ಲಾ ರೀತಿಯ ಶೋಷಣೆಯಿಂದ ಸಂರಕ್ಷಿಸತಕ್ಕದ್ದು. ಇದರ ಆಧಾರದ ಮೇಲೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನರಿಗೆ ನೀಡಿರುವ ಸಂವಿಧಾನಾತ್ಮಕ ಸವಲತ್ತುಗಳು ಯಾವುವೆಂದರೆ.

1. **15 ನೇ ವಿಧಿಯ ಪ್ರಕಾರ:** ಜಾತಿ, ಧರ್ಮ, ಲಿಂಗ, ಮುಂತಾದವುಗಳ ಆಧಾರದ ಮೇಲೆ ತಾರತಮ್ಯ ಮಾಡುವಂತಿಲ್ಲ.
2. **16 ನೇ ವಿಧಿಯ ಪ್ರಕಾರ:** ಉದ್ಯೋಗ ನೇಮಕಾತಿಯಲ್ಲಿ ಎಲ್ಲ ನಾಗರಿಕರಿಗೂ ಸಮಾನವಾದ ಅವಕಾಶ.
3. **17 ನೇ ವಿಧಿಯ ಪ್ರಕಾರ:** ಅಸ್ಪೃಶ್ಯತೆ ಆಚರಣೆಯನ್ನು ನಿಷೇಧಿಸಲಾಗಿದೆ.
4. **23 ನೇ ವಿಧಿಯ ಪ್ರಕಾರ:** ಬಲಾತ್ಕಾರದ ದುಡಿಮೆ ಕಾನೂನುಬಾಹಿರ.

5. **25 ನೇ ವಿಧಿಯ ಪ್ರಕಾರ**: ಸಾರ್ವಜನಿಕ ಸ್ವರೂಪದ ಎಲ್ಲಾ ಹಿಂದೂ ಧಾರ್ಮಿಕ ಸಂಸ್ಥೆಗಳಲ್ಲಿ ಹಿಂದೂ ಸಮುದಾಯದ ಎಲ್ಲಾ ವರ್ಗಗಳಿಗೂ ಮುಕ್ತ ಅವಕಾಶಗಳನ್ನು ಕಲ್ಪಿಸಿಕೊಡುವುದು.

6. **29 ನೇ ವಿಧಿಯ ಪ್ರಕಾರ:** ಭಾರತದ ಯಾವುದೇ ನಾಗರಿಕ ಸಮೂಹವು ತನ್ನದೇ ಆದ ಭಾಷೆ, ಲಿಪಿ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿಕೊಳ್ಳುವ ಹಕ್ಕನ್ನು ಪಡೆದಿದೆ. ಮತ್ತು ಸರ್ಕಾರ ಮತ್ತು ಸರ್ಕಾರದಿಂದ ಅನುದಾನ ಪಡೆಯುತ್ತಿರುವ ಯಾವುದೇ ಶೈಕ್ಷಣಿಕ ಸಂಸ್ಥೆಯಲ್ಲಿಯೂ ಪ್ರವೇಶವನ್ನು ನಿರಾಕರಿಸುವಂತಿಲ್ಲ.

7. **164 ನೇ ವಿಧಿಯ ಪ್ರಕಾರ:** ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣ ಮತ್ತು ಅಭಿವೃದ್ದಿಗಾಗಿ ಒಬ್ಬ ಮಂತ್ರಿಯನ್ನು ನೇಮಿಸತಕ್ಕದ್ದು.

8. **224 ನೇ ವಿಧಿಯ ಪ್ರಕಾರ:** ಅನುಸೂಚಿಯ ಪ್ರದೇಶಗಳ ಮತ್ತು ಬುಡಕಟ್ಟುಗಳ ಅಭಿವೃದ್ದಿಗಾಗಿ ವಿಶೇಷ ಆಡಳಿತ ಮತ್ತು ಸವಲತ್ತುಗಳನ್ನು ನೀಡುವುದು.

9. **330 ನೇ ವಿಧಿಯ ಪ್ರಕಾರ:** ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಲೋಕಸಭೆ ಯಲ್ಲಿ ಮೀಸಲಾತಿ ಒದಗಿಸುವುದು.

10. **332 ನೇ ವಿಧಿಯ ಪ್ರಕಾರ:** ರಾಜ್ಯಗಳ ರಾಜ್ಯ ಸಭೆಗಳಲ್ಲಿ ಸ್ಥಾನಗಳನ್ನು ಮೀಸಲಿಡುವುದು.

11. **335 ನೇ ವಿಧಿಯ ಪ್ರಕಾರ:** ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ವಿಶೇಷ ಅಧಿಕಾರಿಗಳನ್ನು ನೇಮಿಸುವುದು. ಸೇವೆಗಳು ಹಾಗೂ ಉದ್ಯೋಗಗಳಲ್ಲಿ ಪರಿಶಿಷ್ಟ ಜಾತಿಗಳು ಮತ್ತು ಬುಡಕಟ್ಟುಗಳಿಗೆ ಅವಕಾಶವನ್ನು ಕಲ್ಪಿಸಲಾಯಿತು.

12. **339 ನೇ ವಿಧಿಯ ಪ್ರಕಾರ:** ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕಲ್ಯಾಣ ಮತ್ತು ಅಭಿವೃದ್ದಿಗಾಗಿ ಆಯೋಗವನ್ನು ನೇಮಿಸುವುದು ಮುಂತಾದವು.

## 7.3 ಮಹಿಳೆಯರ ಸಬಲೀಕರಣ ಮತ್ತು ಕಾನೂನುಗಳು:

ಮಕ್ಕಳೇ ಇತ್ತೀಚಿಗೆ ನಡೆದ ಚುನಾವಣೆಗಳನ್ನು ನೀವು ಗಮನಿಸಿರಬಹುದು. ತಾಲೂಕು ಮತ್ತು ಜಿಲ್ಲಾ ಪಂಚಾಯಿತಿಗಳಲ್ಲಿ ಪುರುಷರಿಗೆ ಎಷ್ಟು ಅವಕಾಶ ದೊರೆಯಿತೋ ಅಷ್ಟೇ ಅವಕಾಶಗಳು ಮಹಿಳೆಯರಿಗೂ ದೊರೆತಿದೆ. ಹಾಗೂ ತಮಿಳುನಾಡಿನಲ್ಲಿ ಜಯಲಲಿತರವರು ಮತ್ತು ಪಶ್ಚಿಮ ಬಂಗಾಳದಲ್ಲಿ ಮಮತಾ ಬ್ಯಾನರ್ಜಿರವರು ಮುಖ್ಯಮಂತ್ರಿಯಾಗಿ ಅಧಿಕಾರ ನಡೆಸುತ್ತಿದ್ದಾರೆ. ಕರ್ನಾಟಕ ರಾಜಕೀಯದಲ್ಲಿ ಶೋಭಾ ಕರಂದ್ಲಾಜೆ, ಪ್ರಮೀಳಾ ನೇಸರ್ಗಿ, ಮೋಟಮ್ಮ, ರಮ್ಯ, ಅನಿತಾ ಕುಮಾರಸ್ವಾಮಿ, ಶಿಕ್ಷಣದಲ್ಲಿ ಮದರ್ ತೇರೆಸಾ, ಸಿನಿಮಾದಲ್ಲಿ ಹೇಮಮಾಲಿನಿ, ಐಶ್ವರ್ಯ ರೈ, ದೀಪಿಕಾ ಪಡುಕೊಣೆ,

ಅಮೂಲ್ಯ, ಭಾರತಿ ವಿಷ್ಣುವರ್ಧನ್, ಸುಮಲತಾ, ಕ್ರೀಡೆಯಲ್ಲಿ ಸೈನಾ ನೇಹಾಲ್, ಸಾನಿಯಾ ಮಿರ್ಜಾ, ಪಿ. ಟಿ ಉಷಾ, ವಿಜ್ಞಾನದಲ್ಲಿ ಕಲ್ಪನಾ ಚಾವ್ಲ ಹಾಗು ಆಟೋ ಚಾಲಕರಾಗಿ, ಬಸ್ ಚಾಲಕರಾಗಿ, ಉದ್ಯಮಿಗಳಾಗಿ, ಗಗನಯಾತ್ರಿಯರಾಗಿ, ಕಾರ್ಯನಿರ್ವಹಿಸುತ್ತಿದ್ದಾರೆ. ಹೀಗೆ ಹಲವಾರು ಮಹಿಳೆಯರು ಸಾಧನೆ ಮಾಡಿ ಹೆಸರು ಗಳಿಸಿರುವುದನ್ನು ನೋಡುತ್ತೇವೆ. ಇದನ್ನು ನಾವು ಮಹಿಳಾ ಸಬಲೀಕರಣದ ಒಂದು ಭಾಗ ಎಂದು ಕರೆಯಬಹುದು. ಏಕೆಂದರೆ ಹಿಂದೆ ಮಹಿಳೆಯರಿಗೆ ಯಾವುದೇ ಅಧಿಕಾರ ದೊರೆಯುತ್ತಿರಲಿಲ್ಲ. ಪುರುಷನ ಅಧೀನತೆಯಲ್ಲಿ ಬದುಕುತ್ತಿದ್ದರು. ಮನೆಗಳಲ್ಲಿ ಯಾವುದೇ ಫಲಾಪೇಕ್ಷೆ ಇಲ್ಲದೆ ದುಡಿಯುತ್ತಿದ್ದರು. ಕೆಲಸಕ್ಕೆ ಹೊಗುತ್ತಿರಲಿಲ್ಲ. ಆದರೆ ಇಂದು ಸಬಲೀಕರಣದ ಪ್ರಭಾವದಿಂದಾಗಿ ಮಹಿಳೆಯರು ವಿವಿಧ ಸ್ಥಾನಮಾನಗಳನ್ನು ಅನುಭವಿಸುತ್ತಿದ್ದಾರೆ ಮತ್ತು ಅಧೀನ ಸ್ಥಾನದಲ್ಲಿರುವವರು ತಮ್ಮ ಹಕ್ಕುಗಳನ್ನು ಚಲಾಯಿಸಲು ಸ್ವಾವಲಂಬಿಗಳಾಗಲು ಸಾಧ್ಯವಾಗುತ್ತದೆ.

ಸಬಲೀಕರಣ ಎಂದರೆ ಅಧಿಕಾರ ಕೊಡುವುದು ಎಂದರ್ಥ ಅಂದರೆ ಮಹಿಳೆಯರನ್ನು ಸಬಲಗೊಳಿಸಲು ಅಧಿಕಾರ ಕೊಡುವುದನ್ನು ಸೂಚಿಸುತ್ತದೆ.

ಸರಸ್ವತಿ ಮತ್ತು ಸುಧಾಕರ ಇಬ್ಬರು ಮಕ್ಕಳು. ಸರಸ್ವತಿ ದೊಡ್ಡವಳು 8 ನೇ ತರಗತಿಯಲ್ಲಿದ್ದಾಳೆ ಮತ್ತು ಸುಧಾಕರ 5 ನೇ ತರಗತಿಯಲ್ಲಿದ್ದಾನೆ ಸುಧಾಕರನಿಗೆ ಅವರಮ್ಮ ಪ್ರತಿದಿನ ಕುಡಿಯಲು ಗಟ್ಟಿ ಹಾಲು ಕೊಡುತ್ತಾರೆ. ಆದರೆ ಸರಸ್ವತಿಗೆ ನೀರು ಹಾಲಿನ ಕಾಫಿ ಸಿಗುತ್ತದೆ. ಸುಧಾಕರನಿಗೆ ಅವರಪ್ಪ ಚಾಕಲೇಟ್ ಬಿಸ್ಕೇಟ್, ಕೇಕ್ ಮುಂತಾದವನ್ನು ತಂದುಕೊಟ್ಟರೆ ಸರಸ್ವತಿಗೆ ಅವನು ತಿಂದು ಉಳಿದಿದ್ದು ಅಥವ ಅವನು ಚೆನ್ನಾಗಿಲ್ಲ ಬೇಡವೆಂದು ಬಿಟ್ಟಿದ್ದು ಸಿಗುತ್ತದೆ. ಸಂಜೆ ಮನೆಗೆ ಹೋಗಿ ಪಾತ್ರೆ ತೊಳೆಯುವುದು, ಬಟ್ಟೆ ಮಡಿಸಿ ಎತ್ತಿಡುವುದು. ಅಡುಗೆಗೆ ಸಹಾಯ ಮಾಡುವುದು. ಸರಸ್ವತಿಯ ಕೆಲಸವಾದರೆ ಸ್ನೇಹಿತರೊಂದಿಗೆ ಆಟವಾಡಿ ಬಂದು ಓದಿಕೊಳ್ಳವುದು ಮತ್ತು ಊಟ ಮಾಡಿ ಮಲಗುವುದು ಸುಧಾಕರನ ಕೆಲಸ. ಸುಧಾಕರನಿಗೆ ಕೇಳಿದ ಕೂಡಲೇ ಸಿಗುವ ಪೆನ್ನು ಪುಸ್ತಕ ತಿಂಡಿ ಇವು ಸರಸ್ವತಿ ಕಾಡಿಬೇಡಿ ಗೋಗರೆದು ಪಡೆಯಬೇಕು. ಇದು ಗಂಡು ಮತ್ತು ಹೆಣ್ಣು ಮಗುವಿನ ನಡುವೆ ತಂದೆ ತಾಯಿಯರು ಮಾಡುವ ತಾರತಮ್ಯ ಆದ್ದರಿಂದ ಮಕ್ಕಳೇ ಎಲ್ಲಾ ಸಮಾಜಗಳಲ್ಲಿಯೂ ಲಿಂಗ ತಾರತಮ್ಯತೆಯನ್ನು ನಾವು ನೋಡಬಹುದು ಅದರಲ್ಲಿ ಭಾರತೀಯ ಸಮಾಜದಂತಹ ಸಾಂಪ್ರದಾಯಿಕ ಸಮಾಜಗಳಲ್ಲಿ ಈ ಅಸಮಾನತೆ ಇನ್ನೂ ಹೆಚ್ಚಾಗಿ ಕಂಡು ಬರುತ್ತದೆ.

**ನಿಮಗೆ ತಿಳಿದಿರಲಿ:** ಪುರುಷರಿಗೆ ಸರಿಸಮಾನವಾದ ಅಂತಸ್ತು ಮತ್ತು ಅವಕಾಶಗಳನ್ನು ನೀಡಿ ಮಹಿಳೆಯರಿಗೆ ಅಧಿಕಾರ, ಜವಬ್ದಾರಿ, ಮತ್ತು ನಿರ್ಧಾರ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳಲು ಅನುವು ಮಾಡಿಕೊಡುವುದೇ ಮಹಿಳಾ ಸಬಲೀಕರಣ.

ತಲೆತಲಾಂತರದಿಂದ ಮಹಿಳೆಯರನ್ನು ದುರ್ಬಲರು ಅಶಕ್ತರು ಎಂದು ಪರಿಗಣಿಸಿ ಅವರು ಪುರುಷರ ಮೇಲೆ ಅವಲಂಬಿತರಾಗಿ ಜೀವನ ನಡೆಸುವಂತೆ ನಿಯಂತ್ರಿಸಲಾಗುತ್ತಿತ್ತು. ಇಂದಿನ ಆಧುನಿಕ ಸಮಾಜದಲ್ಲಿ ಪುರುಷರಿಗೆ ಸರಿಸಮಾನವಾಗಿ ಸ್ತ್ರೀಯರು ಎಲ್ಲಾ ಕ್ಷೇತ್ರಗಳಲ್ಲೂ ಮುಂದುವರೆಯುತ್ತಿದ್ದು ತಮ್ಮ ಕಾಲ ಮೇಲೆ ತಾವು ನಿಂತು ತಮ್ಮ

ಜೀವನವನ್ನು ತಾವೇ ನಿಯಂತ್ರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾಳೆ. ಇದನ್ನೆ ನಾವು ಸಬಲೀಕರಣ ಎನ್ನಬಹುದು.

ಪ್ರಪಂಚದಾದ್ಯಂತ ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆ ಎಂದು ಪರಿಗಣಿಸಿ ಅವರನ್ನು ಕೇವಲ ಕುಟುಂಬದ ನಿರ್ವಹಣೆಗೆ ಮಾತ್ರ ಸೀಮಿತಗೊಳಿಸಲಾಗಿತ್ತು. 20 ನೇ ಶತಮಾನದ ಆದಿಯಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮಹಿಳಾ ಚಳುವಳಿದಾರರ ಪ್ರಯತ್ನದಿಂದ ಮತದಾನದ ಹಕ್ಕನ್ನು ಮಹಿಳೆಯರಿಗೂ ನೀಡುವ ಮೂಲಕ ಅಸಮಾನತೆಯ ವಿರುದ್ಧ ಹೋರಾಟ ಯಶಸ್ಸು ಕಾಣತೊಡಗಿತು. ಅಂದಿನಿಂದ ಇಂದಿನವರೆಗೆ ಪ್ರಪಂಚದ ವಿವಿಧ ಭಾಗಗಳಲ್ಲಿ ಮಹಿಳೆಯರ ಸಮಾನತೆಯನ್ನು ಸಾಧಿಸುವ ದೃಷ್ಟಿಯಲ್ಲಿ ಹೋರಾಟಗಳು ನಡೆಯುತ್ತಲೇ ಇವೆ. ಲಿಂಗ ತಾರತಮ್ಯತೆಯನ್ನು ನಿವಾರಿಸಿ ಸಮಾನತೆ ಸಾಧಿಸುವ ನಿಟ್ಟಿನಲ್ಲಿ ಸ್ವಾತಂತ್ರ್ಯಬಂದ ನಂತರ ಭಾರತೀಯ ಸಮಾಜದಲ್ಲಿ ಸಾಕಷ್ಟು ಬದಲಾವಣೆ ಕಾಣಬಹುದಾಗಿದೆ. ಇದಕ್ಕೆ ಪೂರಕವಾದ ವಿಚಾರಗಳು ಈ ಕೆಳಕಂಡಂತೆ ಇವೆ.

ವಿಶ್ವಸಂಸ್ಥೆಯು 1975 ರ ವರ್ಷವನ್ನು ‘ಅಂತರರಾಷ್ಟ್ರೀಯ ಮಹಿಳಾ ವರ್ಷ’ ಎಂದು ಘೋಷಿಸಿ ಹಲವಾರು ಕಾರ್ಯಕ್ರಮಗಳು ಮತ್ತು ಚಟುವಟಿಕೆಗಳಿಗೆ ಚಾಲನೆ ನೀಡಿತು. ಇವು ಮಹಿಳೆಯರ ಸ್ಥಾನಮಾನ, ಅಂತಸ್ತು, ಆರೋಗ್ಯ, ಶಿಕ್ಷಣ ಮುಂತಾದವುಗಳನ್ನು ಉತ್ತಮ ಪಡಿಸುವ ದೃಷ್ಟಿಯಿಂದ ರೂಪಿಸಲಾಗಿತ್ತು. ಭಾರತ ಸರ್ಕಾರವು ಸ್ವಾತಂತ್ರ್ಯನಂತರ ವಿಶ್ವ ಸಂಸ್ಥೆಯ ಎಲ್ಲಾ ಅಭಿವೃದ್ಧಿ ಕಾರ್ಯಸೂಚಿಗಳನ್ನು ಅಳವಡಿಸಿಕೊಳ್ಳುವುದರ ಜೊತೆಗೆ ಮಹಿಳಾ ಸಬಲೀಕರಣದ ಕಾರ್ಯತಂತ್ರಗಳನ್ನು ವಿಶೇಷವಾಗಿ ಅಳವಡಿಸಿಕೊಂಡು ಮಹಿಳೆಯರ ಸಮಾನತೆ ಮತ್ತು ಸಬಲೀಕರಣದ ಹಾದಿಯಲ್ಲಿ ಶ್ರಮಿಸುತ್ತಿದೆ. ಇದಕ್ಕೆ ಪೂರಕವಾಗಿ ಹಲವಾರು ಸಂವಿಧಾನಾಕ ಕ್ರಮಗಳನ್ನು ರೂಪಿಸಿದೆ ಅವು ಯಾವುವೆಂದರೆ.

1. **14 ನೇ ವಿಧಿಯ ಪ್ರಕಾರ:** ಸ್ತ್ರೀಯರು ಸೇರಿದಂತೆ ಎಲ್ಲಾ ಭಾರತೀಯ ನಾಗರಿಕರಿಗೆ ಸಮಾನತೆ ಇದೆ.

2. **15 (1) ನೇ ವಿಧಿಯ ಪ್ರಕಾರ:** ಧರ್ಮ, ಜಾತಿ, ಭಾಷೆ ಸಂಬಂಧಿಸಿದಂತೆ ಯಾವುದೇ ತಾರತಮ್ಯ ಮಾಡುವಂತಿಲ್ಲ.

3. **15 (2) ನೇ ವಿಧಿಯ ಪ್ರಕಾರ:** ಸಾರ್ವಜನಿಕ ಸ್ಥಳಗಳು, ಸಂಸ್ಥೆಗಳು, ಮತ್ತು ಪ್ರದೇಶಗಳಿಗೆ ಪ್ರವೇಶ ಮತ್ತು ಬಳಕೆಗೆ ನಿರ್ಬಂಧ ಹೇರುವಂತಿಲ್ಲ.

4. **15 (3) ನೇ ವಿಧಿಯ ಪ್ರಕಾರ:** ಮಹಿಳೆಯರು ಮತ್ತು ಮಕ್ಕಳ ರಕ್ಷಣೆ, ಕಲ್ಯಾಣ ಅಥವಾ ಅಭಿವೃದ್ಧಿಯ ದೃಷ್ಟಿಯಿಂದ ರಾಜ್ಯವು ವಿಶೇಷ ಉಪಬಂಧಗಳನ್ನು ಮಾಡಬಹುದು.

5. **16 ನೇ ವಿಧಿಯ ಪ್ರಕಾರ:** ಯಾವುದೇ ಸರ್ಕಾರ/ ಸರ್ಕಾರದ ಅಧೀನದಲ್ಲಿರುವ ಅಥವಾ ಸರ್ಕಾರದಿಂದ ಅನುದಾನ ಪಡೆಯುವು ಕಛೇರಿಗಳಲ್ಲಿ ನೇಮಕಾತಿಗೆ ಸಂಬಂಧಿಸಿದಂತೆಸ್ತ್ರೀಯರಿಗೂ ಒಳಗೊಂಡು ಎಲ್ಲರಿಗೂ ಸಮಾನ ಅವಕಾಶಗಳು.

6. **39 (ಎ) ನೇ ವಿಧಿಯ ಪ್ರಕಾರ:** ಸ್ತ್ರೀ-ಪುರುಷ ಭೇದವಿಲ್ಲದೆ ಎಲ್ಲರಿಗೂ ಜೀವನಕ್ಕೆ ಅಗತ್ಯವಾದ ಸಾಧನಗಳನ್ನು ಒದಗಿಸುವ ನೀತಿಯನ್ನು ರೂಪಿಸುವುದು.
7. **39 (ಡಿ) ನೇ ವಿಧಿಯ ಪ್ರಕಾರ:** ಲಿಂಗಭೇದವಿಲ್ಲದೆ ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನಿಗಧಿಪಡಿಸುವುದು.
8. **42 ನೇ ವಿಧಿಯ ಪ್ರಕಾರ:** ಮಹಿಳಾ ಉದ್ಯೋಗಿಗಳಿಗೆ ಅಗತ್ಯವಾದ ಮಾನವೀಯ ಪರಿಸ್ಥಿತಿಗಳನ್ನು ನಿರ್ಮಿಸುವುದು ಮತ್ತು ಹೆರಿಗೆ ರಜೆ ಮತ್ತು ಭತ್ಯೆ ಇನ್ನಿತರ ಸೌಲಭ್ಯಗಳನ್ನು ಒದಗಿಸುವುದು ರಾಜ್ಯದ ಹೊಣೆ.
9. **46 ನೇ ವಿಧಿಯ ಪ್ರಕಾರ:** ಸ್ತ್ರೀಯರನ್ನು ಒಳಗೊಂಡು ಎಲ್ಲಾ ದುರ್ಬಲ ವರ್ಗಗಳ ಶೈಕ್ಷಣಿಕ ಮತ್ತು ಆರ್ಥಿಕ ಹಿತಾಸಕ್ತಿ ಕಾಪಾಡುವುದು.
10. **51 (ಎ) ನೇ ವಿಧಿಯ ಪ್ರಕಾರ:** ಮಹಿಳೆಯರ ಅವಹೇಳನಕ್ಕೆ ನಿರ್ಬಂಧ ಮತ್ತು ಅಂತಹ ಪದ್ಧತಿ ಆಚರಣೆಗಳನ್ನು ತ್ಯಜಿಸುವುದು, ಮುಂತಾದವುಗಳು.

### 7.4 ಅಲ್ಪ ಸಂಖ್ಯಾತರ ರಕ್ಷಣಾತ್ಮಕ ಕ್ರಮಗಳು

ಅಲ್ಪಸಂಖ್ಯಾತರು ಎಂಬ ಪದವನ್ನು ಮೈನಾರಿಟಿ ಎಂಬ ಇಂಗ್ಲೀಷ್ ಪದಕ್ಕೆ ಸರಿಸಮಾನವಾದ ಪದವಾಗಿ ಬಳಸುತ್ತೇವೆ. ಅಲ್ಪಸಂಖ್ಯಾತರು ಎಂದರೆ ಸಂಖ್ಯೆಯಲ್ಲಿ ಕಡಿಮೆ ಇರುವವರನ್ನು ಅಲ್ಪಸಂಖ್ಯಾತರು ಎಂದು ಕರೆಯುತ್ತೇವೆ. ಅಥವಾ ಜನಸಂಖ್ಯೆಯಲ್ಲಿ ಅರ್ಧಕ್ಕಿಂತಲೂ ಕಡಿಮೆ ಇರುವ ಚಿಕ್ಕದಾದ ಸಂಖ್ಯೆ ಅಥವಾ ಕಡಿಮೆ ಸಂಖ್ಯೆಯಲ್ಲಿ ಇರುವಂತವರನ್ನು ಅಲ್ಪಸಂಖ್ಯಾತರು ಎಂದು ಕರೆಯಬಹುದು.

**ಅಲ್ಪಸಂಖ್ಯಾತರ ರಕ್ಷಣಾತ್ಮಕ ಕ್ರಮಗಳು ಯಾವುವೆಂದರೆ:**

25 (1) ನೇ ವಿಧಿಯು ಜನರು ತಮಗೆ ಬೇಕಾದ ಮತವನ್ನು ಅನುಸರಿಸಲು ಅದನ್ನು ಪ್ರಚಾರ ಮಾಡಲು ಸಮಾನ ಅವಕಾಶವನ್ನು ನೀಡಲಾಗಿದೆ.

**26 ನೇ ವಿಧಿಯ ಪ್ರಕಾರ:** ಪ್ರತಿಯೊಂದು ಮತಕ್ಕೂ ಧಾರ್ಮಿಕ ಹಾಗೂ ಸೇವಾರ್ಥ ಉದ್ದೇಶಗಳಿಗಾಗಿ

ಸಂಸ್ಥೆಗಳನ್ನು ಸ್ಥಾಪಿಸುವ ಅವುಗಳನ್ನು ನಿರ್ವಹಣೆ ಮಾಡಲು ಸ್ವಾತಂತ್ರ್ಯವನ್ನು ನೀಡಲಾಗಿದೆ.

**27 ನೇ ವಿಧಿಯ ಪ್ರಕಾರ:** ಧಾರ್ಮಿಕ ಚಟುವಟಿಕೆಗಳ ಸಂವರ್ಧನೆಗೆ ಅನುಕೂಲವಾಗುವಂತೆ ಅವುಗಳ ವೆಚ್ಚವನ್ನು ತೆರಿಗೆಯಿಂದ ವಿನಾಯಿತಿಗೊಳಿಸಲಾಗಿದೆ.

**28 ನೇ ವಿಧಿಯ ಪ್ರಕಾರ:** ಸಮೂಹಗಳಿಂದ ನಡೆಸಲ್ಪಡುವ ಶಿಕ್ಷಣ, ಭಾಷೆ, ಲಿಪಿ ಅಥವಾ ಸಂಸ್ಕೃತಿಯನ್ನು ಸಂರಕ್ಷಿಸಿಕೊಳ್ಳುವ ಹಕ್ಕನ್ನು ನೀಡಿದೆ.

**30 ನೇ ವಿಧಿಯ ಪ್ರಕಾರ:** ಅಲ್ಪಸಂಖ್ಯಾತ ಸಮೂಹಗಳು ಅವರ ಆಯ್ಕೆಯ ಅನುಸಾರ ಶೈಕ್ಷಣಿಕ ಸಮೂಹಗಳನ್ನು ಸ್ಥಾಪಿಸಲು ಹಾಗೂ ಅವುಗಳ ಆಡಳಿತ ನಿರ್ವಹಣೆ ಮಾಡಲು ಅವಕಾಶ ನೀಡಲಾಗಿದೆ. ಮುಂತಾದವುಗಳು.

## 7.5 ಲೈಂಗಿಕ ಅಲ್ಪಸಂಖ್ಯಾತರು:

ಮಕ್ಕಳೇ ಮಹಾಭಾರತದಲ್ಲಿ ಪಾಂಡವ ಮತ್ತು ಕೌರವರ ನಡುವೆ ಯುದ್ಧ ನಡೆಯಿತು. ಇಬ್ಬರಿಗೂ ಹಿರಿಯರಾದ ಬೀಷ್ಮನನ್ನು ಕೊಲ್ಲಲು ಯಾರಿಗೂ ಸಾಧ್ಯವಿರುವುದಿಲ್ಲ. ಅಂತಹ ಸಂದರ್ಭದಲ್ಲಿ ಬೀಷ್ಮರ ಎದುರಿಗೆ ಹೆಣ್ಣಿನ ವೇಷತೊಟ್ಟ ಶಿಖಂಡಿಯನ್ನು ಪಾಂಡವರು ಕಳುಹಿಸುತ್ತಾರೆ. ಆಗ ಭೀಷ್ಮರು ಶಿಖಂಡಿಯನ್ನು ಹೆಣ್ಣಾಗಿ ಭಾವಿಸಿ ನಾನು ಒಂದು ಹೆಣ್ಣಿನ ವಿರುದ್ಧ ಯುದ್ಧವನ್ನು ಮಾಡುವುದಿಲ್ಲ ಎಂದು ಹೇಳಿ ತಮ್ಮ ಭಾಣ ಬಿಲ್ಲುಗಳನ್ನು ಕೆಳಗಿಡುತ್ತಾರೆ. ಇಂತಹ ಸಂದರ್ಭವನ್ನು ಕಾಯುತ್ತಿದ್ದ ಅರ್ಜುನನು ಭೀಷ್ಮರನ್ನು ನಿರಾಯುಧರಾದ ಸಂಧರ್ಭದಲ್ಲಿ ಕೊಲ್ಲುತ್ತಾನೆ. ಈ ಕಥೆಯು ಮಹಾಭಾರತದ ಕಾಲದಲ್ಲಿಯೂ ಲೈಂಗಿಕ ಅಲ್ಪಸಂಖ್ಯಾತರು ಇದ್ದರು ಎಂಬುದಕ್ಕೆ ಉದಾಹರಣೆಯಾಗಿದೆ.

ಟ್ರಾಪಿಕ್, ಟ್ರೈನಿನಲ್ಲಿ ಅಥವಾ ಸಾರ್ವಜನಿಕ ಪ್ರದೇಶಗಳಲ್ಲಿ ಹೋಗುವಾಗ ಹೆಂಗಸಿನ ವೇಷ ತೊಟ್ಟ ವ್ಯಕ್ತಿಗಳು ಭಿಕ್ಷೆ ಬೇಡುವುದು, ಹಣ ಕೊಟ್ಟವರನ್ನು ಹರಸುವುದು ಮಾಡುವಂತಹ ಜನರನ್ನು ಕಾಣಬಹುದು. ನಿಮ್ಮ ಮನಸಿನಲ್ಲಿ ಅವರು ಯಾರು? ಏಕೆ ಹೀಗೆ ಇದ್ದಾರೆ? ಈ ವೇಷ ತೊಟ್ಟಿರಲು ಕಾರಣವೇನು ಎಂಬ ಮೊದಲಾದ ಪ್ರಶ್ನೆಗಳು ಬಂದಿರಬಹುದು. ಇವರೆಲ್ಲಾ ಲೈಂಗಿಕ ಅಲ್ಪ ಸಂಖ್ಯಾತರು.

ಹಾಗಾದರೆ ಲೈಂಗಿಕ ಅಲ್ಪಸಂಖ್ಯಾತರು ಎಂದರೆ ಯಾರು? ಹುಟ್ಟಿನಿಂದ ಗಂಡಸಾಗಿ ಬೆಳೆಯುತ್ತಾ ಹೆಣ್ಣಿನ ಭಾವನೆಗಳನ್ನು ಬೆಳೆಸಿಕೊಳ್ಳುವುದು, ಹೆಣ್ಣಿನ ಉಡುಪುಗಳನ್ನು ತೊಡುವುದು. ಹಾಗೆಯೇ ಹುಟ್ಟಿನಿಂದ ಹೆಣ್ಣಾಗಿ ಬೆಳೆಯುತ್ತಾ ಗಂಡಿನ ಭಾವನೆ, ಉಡುಪು, ಮೊದಲಾದವುಗಳನ್ನು ರೂಢಿಸಿಕೊಳ್ಳುತ್ತಾರೆ. ಈ ಗುಣಲಕ್ಷಣಗಳನ್ನು ಹೊಂದಿರುವವರು ಕಡಿಮೆ ಜನ. ಅಂದರೆ ಸಮಾಜದಲ್ಲಿ ಹೆಣ್ಣು ಮತ್ತು ಗಂಡು ಎಂದು ವರ್ಗೀಕರಣಗೊಂಡ ಜನಸಂಖ್ಯೆಯು ಜಾಸ್ತಿ ಇದೆ. ಇದರ ಮಧ್ಯೆ ಇಂತಹ ಜನರನ್ನು ಲೈಂಗಿಕ ಅಲ್ಪಸಂಖ್ಯಾತರು ಎಂದು ಕರೆಯುತ್ತಾರೆ.

ಲೈಂಗಿಕ ಅಲ್ಪಸಂಖ್ಯಾತರನ್ನು ಕೋಜ, ಹಿಜಿಡಾ, ಎಂಬ ಹೆಸರುಗಳಿಂದ ಕರೆಯುತ್ತಾರೆ. ಆದರೆ ಈ ಪದಗಳನ್ನು ಬಳಸಿ ಅವರನ್ನು ಕರೆಯುವುದು ತಪ್ಪು. ಆದುದರಿಂದ ಅವರನ್ನು ತೃತೀಯ ಲಿಂಗಿಗಳೆಂದು ಕರೆಯಲಾಗುತ್ತದೆ.

ಈಗ ಲೈಂಗಿಕ ಅಲ್ಪಸಂಖ್ಯಾತರನ್ನು ಕುರಿತು ಚರ್ಚೆಯಾಗುತ್ತಿದೆ. ಏಕೆಂದರೆ ಅವರಿಗೆ ಯಾವುದೇ ನಿಶ್ಚಿತ ಉದ್ಯೋಗವಿಲ್ಲದೆ ಭಿಕ್ಷಾಟನೆಯಲ್ಲಿ ತೊಡಗಿದ್ದಾರೆ. ಅನಕ್ಷರತೆ, ಬಡತನ, ನೀರುದ್ಯೋಗ ಅವರನ್ನು ಕಾಡುವ ಸಮಸ್ಯೆಯಾಗಿವೆ. ಸಮಾಜದಲ್ಲಿ ಮತ್ತು ಕುಟುಂಬದಲ್ಲಿ ಅವರಿಗೆ ಕೊಡಬೇಕಾದಷ್ಟು ಗೌರವನ್ನು ನೀಡದಿರುವುದನ್ನು ಕಂಡುಬರುತ್ತದೆ. ಇದರಿಂದ

ಕೆಲವೊಮ್ಮೆ ಪೋಲಿಸರು ಸರಿಯಾದ ತಿಳುವಳಿಕೆ ಇಲ್ಲದೆ ಲೈಂಗಿಕ ಅಲ್ಪಸಂಖ್ಯಾತರನ್ನು ಹಿಂಸಿಸುವ, ಬಂಧಿಸುವ, ಪ್ರಕರಣಗಳು ಪತ್ರಿಕಗಳಲ್ಲಿ ವರದಿಯಾಗಿವೆ.

ಇದನ್ನು ಗಮನಿಸಿದ ಡಾ. ಸಿ. ಎಸ್. ದ್ವಾರಕಾನಾಥ್ ಹಿಂದುಳಿದ ವರ್ಗಗಳ ಆಯೋಗದ ವರದಿಯು ಲೈಂಗಿಕ ಅಲ್ಪಸಂಖ್ಯಾತರಿಗೆ ಮೀಸಲಾತಿ, ಉದ್ಯೋಗವಕಾಶ ಮತ್ತು ರಾಜಕೀಯ ಪ್ರಾತಿನಿಧ್ಯವನ್ನು ನೀಡಬೇಕೆಂದು ಶಿಪಾರಸ್ಸು ಮಾಡಿದರು. ವಿವಿಧ ಸ್ವಯಂ ಸೇವಾ ಸಂಸ್ಥೆಗಳು ಲೈಂಗಿಕ ಅಲ್ಪ ಸಂಖ್ಯಾತರು ಮತ್ತು ಅವರ ಸಮಸ್ಯೆಗಳನ್ನು ಕುರಿತು ಸಾಮಾನ್ಯ ಜನರಿಗೆ ತಿಳುವಳಿಕೆಯನ್ನು ನೀಡುತ್ತಿವೆ. ಇತ್ತೀಚಿನ ದಿನಗಳಲ್ಲಿ ಲೈಂಗಿಕ ಅಲ್ಪಸಂಖ್ಯಾತರನ್ನು ಕುರಿತ ಮನೋಭಾವವು ಬದಲಾಗುತ್ತಿರುವುದನ್ನು ಗುರ್ತಿಸಬಹುದು.

## ಸಾರಾಂಶ

1. ಲಿಂಗ ಅಸಮಾನತೆ ಎಂದರೆ ಗಂಡು ಹೆಣ್ಣಿನ ನಡುವೆ ಇರುವ ಬೇದಭಾವ.
2. 17 ನೇ ವಿಧಿಯ ಪ್ರಕಾರ ಅಸ್ಪೃಶ್ಯತೆ ಆಚರಣೆಯನ್ನು ನಿಷೇಧಿಸಲಾಗಿದೆ.
3. ಲೈಂಗಿಕ ಅಲ್ಪಸಂಖ್ಯಾತರು ಎಂದರೆ ಹುಟ್ಟಿನಿಂದ ಗಂಡಸಾಗಿ ಬೆಳೆಯುತ್ತಾ ಹೆಣ್ಣಿನ ಭಾವನೆಗಳನ್ನು ಬೆಳೆಸಿಕೊಳ್ಳುವುದು. ಹೆಣ್ಣಿನ ಉಡುಪುಗಳನ್ನು ತೊಡುವುದು. ಹಾಗೆಯೇ ಹುಟ್ಟಿನಿಂದ ಹೆಣ್ಣಾಗಿ ಬೆಳೆಯುತ್ತಾ ಗಂಡಿನ ಭಾವನೆ, ಉಡುಪು, ಮೊದಲಾದವುಗಳನ್ನು ರೂಢಿಸಿಕೊಳ್ಳುವರು.
4. 39 (ಡಿ) ನೇ ವಿಧಿಯ ಪ್ರಕಾರ ಲಿಂಗಭೇದವಿಲ್ಲದೆ ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನಿಗಧಿಪಡಿಸುವುದು.
5. ವಿಶ್ವ ಸಂಸ್ಥೆಯು 1975 ರ ವರ್ಷವನ್ನು 'ಅಂತರರಾಷ್ಟ್ರೀಯ ಮಹಿಳಾ ವರ್ಷ' ಎಂದು ಘೋಷಿಸಿದೆ.
6. 25 ನೇ ವಿಧಿಯ ಪ್ರಕಾರ ಸಾರ್ವಜನಿಕ ಸ್ವರೂಪದ ಎಲ್ಲಾ ಹಿಂದೂ ಧಾರ್ಮಿಕ ಸಂಸ್ಥೆಗಳಲ್ಲಿ ಹಿಂದೂ ಸಮುದಾಯದ ಎಲ್ಲಾ ವರ್ಗಗಳಿಗೂ ಮುಕ್ತ ಅವಕಾಶಗಳನ್ನು ಕಲ್ಪಿಸಿಕೊಡುವುದು.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. 17 ನೇ ವಿಧಿಯು ________ ನ್ನು ನಿಷೇಧಿಸಿದೆ.
2. ಲಿಂಗ ಅಸಮಾನತೆ ಎಂದರೆ ________ ನಡುವೆ ಇರುವ ಬೇದಭಾವ.

3. ಮಹಾಭಾರತದಲ್ಲಿ _______ ಮತ್ತು _______ ರವರ ನಡುವೆ ಯುದ್ಧ ನಡೆಯಿತು.
4. ವಿಶ್ವ ಸಂಸ್ಥೆಯು _______ ವರ್ಷವನ್ನು ‘ಅಂತರರಾಷ್ಟ್ರೀಯ ಮಹಿಳಾ ವರ್ಷ’ ಎಂದು ಘೋಷಿಸಿದೆ.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

ಎಂದರೇನು?

16 ನೇ ವಿಧಿಯು ಪ್ರಸ್ತಾಪಿಸಿರುವ ವಿಷಯ ಯಾವುದು?

ಯ ಅಡಿಯಲ್ಲಿ ಸಮಾನ ಕೆಲಸಕ್ಕೆ ಸಮಾನ ವೇತನವನ್ನು ನಿಗಧಿಗೊಳಿಸಿದೆ?

ಎಂದರೇನು?

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

ಕಟ್ಟುಗಳ ಹೆಸರನ್ನು ಬರೆಯಿರಿ.

ರು ಎಂದರೆ ಯಾರು?

ರೂ ಎರಡು ಮಹಿಳಾ ಪರ ಕಾನೂನುಗಳನ್ನು ತಿಳಿಸಿ.

ಸಂಖ್ಯಾತರು ಯಾರು?

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

ಮತ್ತು ಬುಡಕಟ್ಟುಗಳಿಗೆ ನೀಡಿರುವ ಸೌಲಭ್ಯಗನ್ನು ಬರೆಯಿರಿ.

ರ ರಕ್ಷಣಾತ್ಮಕ ಕ್ರಮಗಳನ್ನು ವಿವರಿಸಿ.

ಸಬಲೀಕರಣದ ಬಗ್ಗೆ ಟಿಪ್ಪಣಿ ಬರೆಯಿರಿ.

ಎಂದರೇನು? ವಿವರಿಸಿ.

**ಸಲಹಾತ್ಮಕ ಚಟುವಟಿಕೆಗಳು:**

ಸಂವಿಧಾನ ನೀಡಿರುವ ಸಂವಿಧಾನಾತ್ಮಕ ಸೌಲಭ್ಯಗಳ ಬಗ್ಗೆ ಹೆಚ್ಚಿನ ಮಾಹಿತಿಯನ್ನು ನಿಮ್ಮ ಶಿಕ್ಷಕರ ಬಳಿ ಕೇಳಿ ಪಡೆಯಿರಿ.

ಅಸಮಾನತೆಯ ವಿವಿಧ ಮುಖಗಳನ್ನು ತಿಳಿದು. ಅವುಗಳನ್ನು ಹೋಗಲಾಡಿಸಲು ಪ್ರಯತ್ನಿಸಿ.

## ಅಧ್ಯಾಯ- 8 ಭಾರತೀಯ ಕಾರ್ಮಿಕರು (Indian workers)

**ಕಲಿಕಾಂಶಗಳು:**

1. ಕಾರ್ಮಿಕರು ಎಂದರೆ ಯಾರು ಎಂಬುದನ್ನು ತಿಳಿಯೋಣ.
2. ಕಾರ್ಮಿಕರು ದುಡಿಯುವ ಕ್ಷೇತ್ರವನ್ನು ಅಧ್ಯಯನ ಮಾಡೋಣ.
3. ಕಾರ್ಮಿಕರ ಸಮಸ್ಯೆಗಳು ಯಾವುವು ಅನ್ನುವುದನ್ನು ಅರಿಯೋಣ.
4. ಕಾರ್ಮಿಕರ ಚಳುವಳಿಗಳು ಯಾವ ಯಾವ ರೀತಿಯಲ್ಲಿವೆ ತಿಳಿಯೋಣ.
5. ಬಾಲ ಕಾರ್ಮಿಕರ ಬಗ್ಗೆ ಮಾಹಿತಿ ಪಡೆಯೋಣ.

### 8.1 ಪೀಠಿಕೆ:

ನಾವುಗಳು ರಸ್ತೆಯಲ್ಲಿ ಸಂಚರಿಸುವಾಗ ಅಕ್ಕ ಪಕ್ಕ ತಿರುಗಿ ನೋಡಿದರೆ ಅನೇಕ ಸಂಗತಿಗಳು ಕಣ್ಣ ಮುಂದೆ ಗೋಚರಿಸುತ್ತವೆ. ಹೊಲಗಳಲ್ಲಿ ಉಳುಮೆ ಮಾಡುತ್ತಿರುವುದು, ಕಳೆ ಕೀಳುತ್ತಿರುವುದು, ಹೋಟೆಲ್‌ಗಳಲ್ಲಿ ಸರ್ವರ್ ಆಗಿ ದುಡಿಯುತ್ತಿರುವುದು. ಕಾರ್ಖಾನೆಗಳಲ್ಲಿ ದುಡಿಯುತ್ತಿರುವುದು,

ಬಸ್ಸುಗಳಲ್ಲಿ ಕ್ಲೀನರ್, ಡ್ರೈವರ್ ಆಗಿ, ಮನೆಗಳಲ್ಲಿ ಕೆಲಸ ಮಾಡುವುದು, ರಸ್ತೆಯನ್ನು ಸ್ವಚ್ಛ ಗೊಳಿಸುತ್ತಿರುವುದು, ಹೀಗೆ ಹಲವಾರು ವೃತ್ತಿಯಲ್ಲಿ ಕಾರ್ಯ ನಿರ್ವಹಿಸುವ ಜನರನ್ನು ನಿತ್ಯ ನೋಡುತ್ತೇವೆ. ಇವರೆಲ್ಲರನ್ನು ನಾವು ಕಾರ್ಮಿಕರು ಎಂದು ಕರೆಯುತ್ತೇವೆ.

**ನಿಮಗೆ ತಿಳಿದಿರಲಿ:** ಸರ್ಕಾರದ ಆದೇಶದ ಪ್ರಕಾರ ಕಾರ್ಮಿಕರು ದಿನದಲ್ಲಿ 8 ಗಂಟೆಗಳು ಮಾತ್ರ ದುಡಿಯಬೇಕು ಮತ್ತು ಮಹಿಳಾ ಕಾರ್ಮಿಕರು ರಾತ್ರಿ 8 ಗಂಟೆಯ ನಂತರ ಕಾರ್ಖಾನೆಯಲ್ಲಿ ಕೆಲಸ ಮಾಡುವಂತಿಲ್ಲ. ಒಂದು ವೇಳೆ ಕೆಲಸ ಸ್ವಹಿತದಿಂದ ಕೆಲಸ ಮಾಡಿದರೆ ಮಾಲೀಕರು ಅವರನನು ಮನೆಗೆ ಕಳುಹಿಸುವ ವ್ಯವಸ್ಥೆ ಮಾಡಬೇಕು.

### 8.2 ಕಾರ್ಮಿಕರು ಎಂದರೆ ಯಾರು?

ಕಾರ್ಮಿಕರು ಎಂದರೆ ದೈಹಿಕ ಶ್ರಮವನ್ನು ವ್ಯಯಿಸಿ ಮೂಲಭೂತ ಅವಶ್ಯಕತೆಯನ್ನು ಈಡೇರಿಸಿಕೊಳ್ಳಲು ಹಣ ಅಥವಾ ವಸ್ತುವಿನ ರೂಪದಲ್ಲಿ ಪ್ರತಿಫಲವನ್ನು ಪಡೆಯುವವರನ್ನು ಕಾರ್ಮಿಕರು ಎಂದು ಕರೆಯಲಾಗುತ್ತದೆ.

## 8.3 ಕಾರ್ಮಿಕರ ವಿಧಗಳು:

-ಕರು

ಾರ್ಮಿಕರು

ಕಾರ್ಮಿಕರ ವಿಧಗಳನ್ನು ಹಲವು ಭಾಗಗಳಾಗಿ ವಿಂಗಡಿಸಲಾಗಿದೆ ಅವು ಯಾವುವೆಂದರೆ:

**1. ಕೃಷಿ ಕಾರ್ಮಿಕರು:**

ಕೃಷಿ ಕಾರ್ಮಿಕರು ಎಂದರೆ ಇತರರ ಕೃಷಿ ಭೂಮಿಯಲ್ಲಿ ಕೆಲಸಮಾಡಿ ವೇತನ ಪಡೆಯುವ ಎಲ್ಲಾ ಕಾರ್ಮಿಕರನ್ನು ಕೃಷಿ ಕಾರ್ಮಿಕರು ಎಂದು ಕರೆಯಲಾಗುತ್ತದೆ. ಈ ಕಾರ್ಮಿಕರು ಕೃಷಿ ಸಂಬಂಧಿ ಚಟುವಟಿಕೆಗಳಾದ ಕೃಷಿ, ಪಶು ಸಂಗೋಪನೆ, ಹೈನುಗಾರಿಕೆ, ಹಂದಿ ಸಕಾಣಿಕೆ, ಕೋಳಿ ಸಕಾಣಿಗೆ ಮುಂತಾದ ಚಟುವಟಿಕೆಗಳಲ್ಲಿ ಕೆಲಸ ಮಾಡುತ್ತಾರೆ.

**2. ಕೈಗಾರಿಕೆ ಕಾರ್ಮಿಕರು:**

ಕೃಷಿಯೇತರ ಕಾರ್ಮಿಕರನ್ನು ಕೈಗಾರಿಕಾ ಕಾರ್ಮಿಕರು ಎಂದು ಕರೆಯುತ್ತೇವೆ. ಈ ಕಾರ್ಮಿಕರು ಸಣ್ಣ, ದೊಡ್ಡ, ಮಧ್ಯಮ ಮತ್ತು ಗೃಹ ಕೈಗಾರಿಕೆಗಳಲ್ಲಿ ವೇತನಕ್ಕಾಗಿ ದುಡಿಯುವವರಾಗಿದ್ದಾರೆ. ಈ ಕಾರ್ಮಿಕರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಸಾರ್ವಜನಿಕ ವಲಯ ಮತ್ತು ಖಾಸಗಿ ವಲಯಗಳಿಗೆ ಸೇರಿದ ನಗರ ಮತ್ತು ಗ್ರಾಮೀಣ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ.

## 8.4 ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳು:

**1. ವಸತಿ:**

ಸಾಮಾನ್ಯವಾಗಿ ಕಾರ್ಮಿಕರು ಕೊಳಗೇರಿಗಳಲ್ಲಿ ವಾಸಮಾಡುತ್ತಾರೆ. ಏಕೆಂದರೆ ಕಾರ್ಖಾನೆಗಳಲ್ಲಿ ಕೆಲವು ಮಾಲೀಕರು ಕಡಿಮೆ ವೇತನ ನೀಡುವುದರಿಂದ ಪ್ರಮುಖ ನಗರಗಳಲ್ಲಿ ವಾಸಿಸಲು ಸಾಧ್ಯವಿಲ್ಲ. ಆ ವೇತನದಿಂದ ಆಹಾರ, ಬಟ್ಟೆ ವಸತಿ ಮತ್ತು ಸಾರಿಗೆ ವೆಚ್ಚ ಇತ್ಯಾದಿಗಳನ್ನು ನಿರ್ವಹಿಸಬೇಕಾಗಿರುವುದರಿಂದ ಕಾರ್ಮಿಕರು ಕಡಿಮೆ ಬಾಡಿಗೆ ಮತ್ತು ಚಿಕ್ಕ ಚಿಕ್ಕ ಮನೆಗಳಲ್ಲಿ ವಾಸಿಸುತ್ತಾರೆ.

**2. ಕಷ್ಟಕರ ಕೆಲಸದ ಪರಿಸ್ಥಿತಿ:**

ಬೀದಿ ಸ್ವಚ್ಛಗೊಳಿಸುವುದು, ರಾಸಾಯನಿಕ ಕಾರ್ಖಾನೆಗಳಲ್ಲಿ ಕೆಲಸ ಮಾಡುವುದು, ಪಟಾಕಿ ಕಂಪನಿಯಲ್ಲಿ ಕೆಲಸ, ಕಬ್ಬಿಣದ ಕಾರ್ಖಾನೆಯಲ್ಲಿ ಕೆಲಸ ಇತ್ಯಾದಿ ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಮೂಲಭೂತ ಸಲಕರಣೆಗಳನ್ನು ನೀಡುವುದಿಲ್ಲ. ಒಂದು ವೇಳೆ ಅವುಗಳನ್ನು ನೀಡಿದರು ಗುಣಮಟ್ಟವಿರುವುದಿಲ್ಲ. ಇದರಿಂದ ಕಾರ್ಮಿಕರು ಅಸ್ತಮಾದಂತಹ ಖಾಯಿಲೆಗಳಿಗೆ ತುತ್ತಾಗುತ್ತಾರೆ. ಆದ್ದರಿಂದ ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರ ಪರಿಸ್ಥಿತಿ ಕಷ್ಟಕರವಾಗಿರುತ್ತದೆ.

**3. ಮಾಲೀಕರಿಂದ ಶೋಷಣೆ:**

ಹೆಚ್ಚಿನ ಕಾರ್ಮಿಕರು ವಲಸೆ ಬಂದವರಾಗಿರುತ್ತಾರೆ. ಅವರಿಗೆ ಕೆಲಸವಿಲ್ಲದೆ ಇರಲು ಸಾಧ್ಯವಿಲ್ಲ. ಏಕೆಂದರೆ ವೇತನ ಬಂದರೆ ಜೀವನ ಎಂಬಂತಾಗಿದೆ. ಇಂತಹ ಸನ್ನಿವೇಶವನ್ನು ಅರಿತ ಕೆಲವು ಮಾಲೀಕರು ಕಾರ್ಮಿಕರನ್ನು ಶೋಷಣೆಗೆ ಒಳಪಡಿಸುತ್ತಾರೆ.

**4. ಜಾಸ್ತಿ ಕೆಲಸ ಕಡಿಮೆ ಕೂಲಿ:**

ಕೆಲವು ಮನೆ, ಕಂಪನಿ, ಶಾಲೆ ಇವುಗಳ ಮುಂದೆ ಸೆಕ್ಯೂರಿಟಿ ಕೆಲಸ ಮಾಡುವವರನ್ನು ನೋಡುತ್ತೇವೆ. ಇವರು ಹೆಚ್ಚು ಸಮಯ ದುಡಿದು ಕಡಿಮೆ ವೇತನವನ್ನು ಪಡೆಯುತ್ತಾರೆ. ಇಷ್ಟೇ ಅಲ್ಲ ಈ ತರಹದ ಹಲವಾರು ಕಾರ್ಮಿಕರು ಹೆಚ್ಚು ಸಮಯ ದುಡಿದು ಕಡಿಮೆ ವೇತನವನ್ನು ಪಡೆದು ಜೀವನವನ್ನು ನಡೆಸುತ್ತಿದ್ದಾರೆ. ಇಂದು ಇದು ಕೂಡ ಒಂದು ಸಮಸ್ಯೆಯಾಗಿದೆ ಎನ್ನಬಹುದು.

**5. ತೀವ್ರ ಬಡತನ:**

ಕಾರ್ಮಿಕರು ದುಡಿಯುವ ವೇತನ ಮಕ್ಕಳ ಶಿಕ್ಷಣ, ಉತ್ತಮ ಆಹಾರ, ವಸತಿ, ವೈದ್ಯಕೀಯ ಸೌಲಭ್ಯ ಇವುಗಳನ್ನು ಪಡೆಯಲು ಸಾಧ್ಯವಾಗದೆ ಬರುವ ಸಂಬಳಕ್ಕಿಂತಲೂ ಹೆಚ್ಚಿನ ಹಣವನ್ನು ಸಾಲ ಮಾಡಿರುತ್ತಾರೆ. ಇದನ್ನು ತೀರಿಸಲು ಸಾಧ್ಯವಾಗದೆ ತೀವ್ರ ಬಡತನದಿಂದ ನರಳುತ್ತಾರೆ.

**6. ಸಂಘಟನೆಯ ಕೊರತೆ:**

ಕಾರ್ಮಿಕರಲ್ಲಿ ಪ್ರಮುಖ ಸಮಸ್ಯೆ ಎಂದರೆ ಸಂಘಟನೆಯ ಕೊರತೆ. ಕೆಲವು ಕಾರ್ಮಿಕರು ತನ್ನ ಕೆಲಸ, ಮನೆ, ಹೆಂಡತಿ, ಮಕ್ಕಳು, ಸಂಬಳ ಇವುಗಳಿಗೆ ಸೀಮಿತರಾಗಿರುತ್ತಾರೆ. ಅವರಿಗೆ ಜೀವನ ನೆಡೆಸಲು ಉದ್ಯೋಗ ಬೇಕಾಗಿರುವುದರಿಂದ ಸಂಘಟನೆಯ ಕಡೆ ಹೊಗುವುದಿಲ್ಲ. ಮತ್ತೊಂದು ಕಡೆ ಸಂಘಟನೆಯಲ್ಲಿ ತೊಡಗಿದರೆ ಕೆಲವು ಮಾಲೀಕರು ಕೆಲಸದಿಂದ ತೆಗೆಯುತ್ತಾರೆ ಎಂಬ ಭಯವಿರಬಹುದು. ಹೀಗೆ ಹಲವಾರು ಕಾರ್ಮಿಕರು ಸಂಘಟನೆಯ ಒಲವು ಇಲ್ಲದಿರುವುದರಿಂದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

## 8.5 ಕಾರ್ಮಿಕ ಚಳುವಳಿಗಳು- ಅನುಕೂಲಗಳು ಮತ್ತು ಅನಾನುಕೂಲಗಳು

ಉದ್ಯಾನನಗರಿ ಎಂದರೆ ನಮ್ಮೆಲ್ಲರಿಗೂ ನೆನಪಾಗುವುದು ಬೆಂಗಳೂರು. ಈ ನಗರದಲ್ಲಿ ಉತ್ಪಾದಿಸುವ ಸಿದ್ಧ ಉಡುಪುಗಳ ಕೈಗಾರಿಕೆಯನ್ನು ನೋಡಿದಾಗ ಈ ಉಡುಪುಗಳು ಇಲ್ಲಿ ಹೆಚ್ಚಾಗಿ ತಯಾರಾಗುವುದು. ನಗರದಲ್ಲಿ ವಾಸಿಸುವ ಬಹುತೇಕ ಮಹಿಳೆಯರು ಸಿದ್ಧ ಉಡುಪುಗಳ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದಾರೆ. ಇತ್ತೀಚೆಗೆ ಕೇಂದ್ರ ಸರ್ಕಾರ ಒಂದು ನೀತಿಯನ್ನು ಜಾರಿಗೆ ತಂದಿತು. ಅದು ಏನೆಂದರೆ ಪಿ. ಎಫ್. ಹಣವನ್ನು ಇನ್ನು ಕೆಲವೇ ದಿನಗಳಲ್ಲಿ ಪಡೆಯಬೇಕು. ಇಲ್ಲವಾದರೆ 59 ವರ್ಷದ ವರೆಗೂ ಪಡೆಯುವಂತಿಲ್ಲ ಎಂಬ ಆದೇಶ ಹೊರಡಿಸಿತು. ಇದರಿಂದ ಸಿಟ್ಟಿಗೆದ್ದ ಕಾರ್ಮಿಕರು ಬೆಂಗಳೂರು ನಗರದಲ್ಲಿ ಒಂದು ಬೃಹತ್ ಚಳುವಳಿಯನ್ನು ಮಾಡಿದರು. ಈ ಚಳುವಳಿಯಲ್ಲಿ ಸುಮಾರು ಸಾವಿರಕ್ಕಿಂತಲೂ ಅಧಿಕ ಸಂಖ್ಯೆಯ ಕಾರ್ಮಿಕರು ಭಾಗಿಯಾಗಿದ್ದರು. ಈ ನೀತಿಯನ್ನು ಕೇಂದ್ರ ಸರ್ಕಾರ ವಾಪಸ್ಸು ಪಡೆಯಬೇಕೆಂದು ಪ್ರತಿಭಟನೆಗೆ ದುಮುಕಿದರು. ಇದರಿಂದ ಸಾರ್ವಜನಿಕ ಆಸ್ತಿ ಪಾಸ್ತಿಗೆ ಬೆಂಕಿ ಬಿದ್ದಿತು. ಇದರಿಂದ ದಿಗ್ಭ್ರಾಂತ ಸರ್ಕಾರ ಈ ನೀತಿಯನ್ನು ವಾಪಸ್ಸು ಪಡೆಯಿತು. ಇಂತಹ ಚಳುವಳಿಗಳನ್ನು ಕಾರ್ಮಿಕ ಚಳುವಳಿಗಳು ಎಂದು ಕರೆಯಬಹುದು.

ಕಾರ್ಮಿಕ ಚಳುವಳಿಗಳು ಎಂದರೆ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದ ಮಾಲೀಕರು ಮತ್ತು ಸರ್ಕಾರ ಜಾರಿಗೆ ತರುವ ನೀತಿಯ ವಿರುದ್ಧ ಕಾರ್ಮಿಕರು ಒಟ್ಟು ಗೂಡಿ ನಡೆಸುವ ಚಳುವಳಿಯೇ ಕಾರ್ಮಿಕ ಚಳುವಳಿ.

ಈ ಕಾರ್ಮಿಕ ಚಳುವಳಿಗಳು ಎಲ್ಲಾ ರಂಗಗಳಲ್ಲಿಯೂ ಕಂಡುಬರುತ್ತವೆ, ಹಿಂದೆ ಸಣ್ಣ ಪ್ರಮಾಣದಲ್ಲಿ ಕಾರ್ಮಿಕ ಚಳುವಳಿಗಳು ನಡೆಯುತ್ತಿದ್ದವು. ಆದರೆ ಇಂದು ಕಾರ್ಮಿಕರು ಹಲವಾರು ಕಾರ್ಮಿಕ ಸಂಘಗಳನ್ನು ಕಟ್ಟಿಕೊಂಡು ಅವುಗಳ ಮೂಲಕ ತಮ್ಮ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಚಳುವಳಿಗಳನ್ನು ನಡೆಸುತ್ತಿದ್ದಾರೆ. ರಾಷ್ಟ್ರಮಟ್ಟದ ಪ್ರಮುಖ ಕಾರ್ಮಿಕ ಸಂಘಗಳೆಂದರೆ ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್, ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್, ಹಿಂದು ಮಜದೂರ್ ಸಭಾ, ಭಾರತೀಯ ಮಜದೂರ್ ಸಂಘ ಇತ್ಯಾದಿ.

**ಕಾರ್ಮಿಕ ಚಳುವಳಿಯಿಂದಾಗುವ ಅನುಕೂಲಗಳು:**

ಕಾರ್ಮಿಕ ಚಳುವಳಿಯಿಂದಾಗುವ ಅನುಕೂಲಗಳು ಯಾವುವೆಂದರೆ

1. ಮೂಲಭೂತ ಸವಲತ್ತುಗಳನ್ನು ಪಡೆಯುತ್ತಾರೆ.
2. ಶೋಷಣೆಯಿಂದ ಮುಕ್ತಿ.
3. ಕಾರ್ಮಿಕ ಹಕ್ಕುಗಳ ರಕ್ಷಣೆ.
4. ಕಾರ್ಮಿಕರ ಒಗ್ಗಟ್ಟು ಪ್ರದರ್ಶನ.

5. ಬಂಡವಾಳಗಾರರ ಅದಃಪತನಕ್ಕೆ ಕೊನೆಗಾಣಿಸುವುದು.

**ಕಾರ್ಮಿಕ ಚಳುವಳಿಯಿಂದಾಗುವ ಅನಾನುಕೂಲಗಳು:**

ಸಾರ್ವಜನಿಕ ಆಸ್ತಿ ಪಾಸ್ತಿ ನಾಶ.

ಉತ್ಪಾದನಾ ಮಟ್ಟ ಕ್ಷೀಣಿಸುವಿಕೆ.

ಸಮಯ ವ್ಯರ್ಥ.

ಗಲಭೆಗಳು ಬೇರೆ ರೂಪ ಪಡೆದುಕೊಳ್ಳುವುದು.

## 8.6 ಬಾಲ ಕಾರ್ಮಿಕರು:

ಶಿವಕಾಶಿ ತಮಿಳುನಾಡಿನಲ್ಲಿರುವ ರಾಮನಾಥಪುರಂ ಜಿಲ್ಲೆಯ ಒಂದು ಸಣ್ಣ ಪಟ್ಟಣ ಈ ಪಟ್ಟಣದ ಹತ್ತಿರ ಇನ್ನು ಎರಡು ಚಿಕ್ಕ ಪಟ್ಟಣಗಳಿವೆ ಅವು ಯಾವುವೆಂದರೆ ತಿರುತಂಗಲ್ ಮತ್ತು ಸತ್ತೂರು. ಈ ಮೂರು ಪಟ್ಟಣಗಳು ಪಟಾಕಿ, ಬೆಂಕಿ ಪಟ್ಟಣ, ಮತ್ತು ಪ್ರಿಂಟಿಂಗ್ ಉದ್ಯಮಕ್ಕೆಪ್ರಸಿದ್ಧವಾಗಿವೆ. ಭಾರತದ ಶೇ. 90 ರಷ್ಟು ಪಟಾಕಿ ಉತ್ಪಾದನೆಯು ಇಲ್ಲಿಯೇ ಆಗುತ್ತದೆ. ಇಲ್ಲಿ ಸುಮಾರು ನಲವತ್ತು ಸಾವಿರ ಜನ ಕಾರ್ಮಿಕರು ಪ್ರತ್ಯಕ್ಷವಾಗಿ ಮತ್ತು ಒಂದು ಲಕ್ಷ ಜನ ಪರೋಕ್ಷವಾಗಿ ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಕಡಿಮೆ ಎಂದರೂ ನಾಲ್ಕರಿಂದ ಐದು ಸಾವಿರದಷ್ಟು ಸಂಖ್ಯೆಯ ಹದಿನಾರು ವಯಸ್ಸಿಗಿಂತ ಮಕ್ಕಳು ದುಡಿಮೆಯಲ್ಲಿ ತೊಡಗಿಕೊಂಡಿದ್ದಾರೆ. ಅನೇಕ ಮಕ್ಕಳು 18 ನೇ ವಯಸ್ಸು ತಲುಪುವ ವೇಳೆಗೆ ಅಸ್ತಮ ಟಿ. ಬಿ. ಮೊದಲಾದ ಖಾಯಿಲೆಗಳಿಗೆ ತುತ್ತಾಗುತ್ತಾರೆ. ನೀವು ದೀಪಾವಳಿ ಹಬ್ಬದಲ್ಲಿ ಬಳಸುವ ಹಾವಿನ ಪಟಾಕಿಯನ್ನು ನೋಡಿರಬೇಕಲ್ಲವೇ. ಹಾವಿನ ಪಟಾಕಿಯನ್ನು ನೈಟ್ರಿಕ್ ಆಸಿಡ್ ಬಳಸಿ ತಯಾರಿಸಲಾಗಿದೆ. ಅದು ಮಕ್ಕಳ ಚರ್ಮಕ್ಕೆ ಅಪಾಯಕಾರಿಯಾದುದು. ಸಮೀಕ್ಷೆಯೊಂದರ ಪ್ರಕಾರ ಶಿವಕಾಶಿಯ ಉದ್ಯೋಗದಲ್ಲಿ ತೊಡಗಿರುವ ಶೇ. 79.48 ರಷ್ಟು ಮಕ್ಕಳು ಶಾಲೆಗೆ ಹೊಗುತ್ತಿಲ್ಲ. ಶಾಲೆ ಬಿಟ್ಟಿರುವರ ಸಂಖ್ಯೆ ಶೇ. 9.2% ಇದೆ. 2014 ರಲ್ಲಿ ಶಿವಕಾಶಿಯಲ್ಲಿ ನಡೆದ ಬೆಂಕಿ ಅನಾಹುತದಲ್ಲಿ ಹಲವಾರು ಜನ ಮೃತಪಟ್ಟರು ನೂರಾರು ಮಕ್ಕಳು ಅಂಗವಿಕಲರಾದರು ಬಾಲ ಕಾರ್ಮಿಕರಿಗೊಸ್ಕರ ಕೆಲಸ ಮಾಡಿ ನೊಬೆಲ್ ಪ್ರಶಸ್ತಿ ಪಡೆದ ಕೈಲಾಶ್ ಸತ್ಯಾರ್ಥಿಯವರ ಪ್ರಕಾರ ಭಾರತದಲ್ಲಿನ ಪಟಾಕಿ ಉದ್ಯಮವು ಸುಮಾರು ಒಂದು ಲಕ್ಷ ಜನ ಮಕ್ಕಳನ್ನು ತನ್ನಲ್ಲಿ ತೊಡಗಿಸಿಕೊಂಡಿದೆ. ಎಂದಿದ್ದಾರೆ. ಈ ಉದಾಹರಣೆಯು ನಮಗೆ ಭಾರತದಲ್ಲಿರುವ ಬಾಲ ಕಾರ್ಮಿಕರ ಪರಿಸ್ಥಿತಿಯನ್ನು ತಿಳಿಸುತ್ತದೆ.

### *ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಪ್ರಕಾರ:*

“ಬಾಲ ಕಾರ್ಮಿಕರು ಎಂದರೆ ದುಡಿಮೆಯ ಒತ್ತಡಕ್ಕೆ ಒಳಗಾಗಿ ಹೆಚ್ಚು ಕೆಲಸ ಮಾಡುತ್ತಾ ನಗಣ್ಯ ವೇತನವನ್ನು ಪಡೆಯುವ ಅತ್ಯಂತ ಅಪಾಯಕಾರಿ ಕೆಲಸಗಳಲ್ಲಿ

ತೊಡಗಿಸಲ್ಪಡುವ ಶೈಕ್ಷಣಿಕ, ದೈಹಿಕ ಹಾಗೂ ಮಾನಸಿಕ ಬೆಳವಣಿಗೆಯಿಂದ ವಂಚಿತವಾಗುವ ಮಕ್ಕಳ ಸಮೂಹವಾಗಿವೆ.

## ಯುನಿಸೆಪ್ ಪ್ರಕಾರ:

ಏಷ್ಯಾ ಖಂಡದಲ್ಲಿ ಶೇ. 61 ರಷ್ಟು ಬಾಲ ಕಾರ್ಮಿಕರಿದ್ದರೆ, ಆಫ್ರಿಕ ಖಂಡದಲ್ಲಿ ಶೇ. 30 ರಷ್ಟು ಬಾಲಕಾರ್ಮಿಕರಿದ್ದಾರೆ. ಅನೇಕ ಬಾಲ ಕಾರ್ಮಿಕರು ಬಡ ದೇಶಗಳಲ್ಲಿ ಜೀತದಾಳುಗಳಾಗಿ, ಒತ್ತೆಯಾಳುಗಳಾಗಿ ದುಡಿಯುತ್ತಿರುವುದು ಕಂಡುಬರುತ್ತದೆ.

ಭಾರತದ ಸಂವಿಧಾನವು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಗುವೊಂದು ಸಂಪಾದನೆಯ ದೃಷ್ಟಿಯಿಂದ ಕೆಲಸ ಮಾಡುತ್ತಿದ್ದಲ್ಲಿ ಅಂತಹ ಮಗುವನ್ನು ದುಡಿಯುವ ಮಗು ಎಂದು ವ್ಯಾಖ್ಯಾನಿಸುತ್ತದೆ.

ಮಕ್ಕಳಿಂದ ದುಡಿಸಿಕೊಳ್ಳುವುದು ಯಾವುದೇ ದೇಶಕ್ಕೆ ಘನತೆ ತರುವ ವಿಚಾರವಲ್ಲ. ಇದರಿಂದ ಮಕ್ಕಳು ಶಿಕ್ಷಣ, ಆರೋಗ್ಯ ಮತ್ತು ಆತ್ಮ ಗೌರವದ ಬದುಕಿನಿಂದ ವಂಚಿತರಾಗುತ್ತಾರೆ. ಬಾಲ ಕಾರ್ಮಿಕರ ಸಮಸ್ಯೆಗಳನ್ನು ನಿವಾರಿಸಲು ಕೇಂದ್ರ ಸರ್ಕಾರ, ಮತ್ತು ರಾಜ್ಯ ಸರ್ಕಾರಗಳು ಅನೇಕ ಕಾನೂನುಗಳನ್ನು ಜಾರಿಗೆ ತಂದಿವೆ. ಇವುಗಳು ಸರಿಯಾಗಿ ಜಾರಿಯಾಗುವಂತೆ ನೋಡಿಕೊಳ್ಳುವುದು ಎಲ್ಲರ ಕರ್ತವ್ಯವಾಗಿದೆ.

### ಸಾರಾಂಶ

1. ಕಾರ್ಮಿಕರು ಎಂದರೆ ಕೃಷಿ, ಕೈಗಾರಿಕೆ, ಹೈನುಗಾರಿಕೆ ಮೊದಲಾದ ಕಡೆ ತಮ್ಮ ದೈಹಿಕ ಶ್ರಮವನ್ನು ವ್ಯಯಿಸುತ್ತ ಮೂಲಭೂತ ಅವಶ್ಯಕತೆಯನ್ನು ಈಡೇರಿಸಿಕೊಳ್ಳಲು ಹಣ ಅಥವಾ ವಸ್ತುವಿನ ರೂಪದಲ್ಲಿ ಪ್ರತಿಫಲವನ್ನು ಪಡೆಯುವವರನ್ನು ಕಾರ್ಮಿಕರು ಎಂದು ಕರೆಯಲಾಗುತ್ತದೆ.

2. ಕಾರ್ಮಿಕರ ಎರಡು ವಿಧಗಳು ಯಾವುವೆಂದರೆ ಕೃಷಿ ಕಾರ್ಮಿಕರು ಮತ್ತು ಕೈಗಾರಿಕಾ ಕಾರ್ಮಿಕರು ಅರ್ಥ ನೀಡಿ.

3. ಕೃಷಿ ಕಾರ್ಮಿಕರು ಎಂದರೆ ಇತರರ ಕೃಷಿ ಭೂಮಿಯಲ್ಲಿ ಕೆಲಸ ಮಾಡಿ ವೇತನ ಪಡೆಯುವ ಎಲ್ಲಾ ಕಾರ್ಮಿಕರನ್ನು ಕೃಷಿ ಕಾರ್ಮಿಕರು ಎಂದು ಕರೆಯಲಾಗುತ್ತದೆ.

4. ಕಾರ್ಮಿಕ ಚಳುವಳಿಗಳು ಎಂದರೆ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳುವ ಉದ್ದೇಶದಿಂದ ಮಾಲೀಕರು ಮತ್ತು ಸರ್ಕಾರ ಜಾರಿಗೆ ತರುವ ಅನುಪಯೋಗ ನೀತಿಯ ವಿರುದ್ಧ ಕಾರ್ಮಿಕರು ಒಟ್ಟುಗೂಡಿ ನಡೆಸುವ ಚಳುವಳಿಯೇ ಕಾರ್ಮಿಕ ಚಳುವಳಿಗಳು.

5. ರಾಷ್ಟ್ರಮಟ್ಟದ ಕಾರ್ಮಿಕ ಸಂಘಗಳೆಂದರೆ ಇಂಡಿಯನ್ ನ್ಯಾಷಿನಲ್ ಟ್ರೈಡ್ ಯೂನಿಯನ್ ಕಾಂಗ್ರೆಸ್, ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್,

ಹಿಂದು ಮಜದೂರ್ ಸಭಾ, ಭಾರತೀಯ ಮಜದೂರ್ ಸಂಘ ಇತ್ಯಾದಿ.

6. ಭಾರತದ ಸಂವಿಧಾನವು 14 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಗುವೊಂದು ಸಂಪಾದನೆಯ ದೃಷ್ಟಿಯಿಂದ ಕೆಲಸ ಮಾಡುತ್ತಿದ್ದಲ್ಲಿ ಅಂತಹ ಮಗುವನ್ನು ದುಡಿಯುವ ಮಗು ಎಂದು ವ್ಯಾಖ್ಯಾನಿಸುತ್ತದೆ.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. ಕೃಷಿ ಭೂಮಿಯಲ್ಲಿ ಕೆಲಸಮಾಡಿ ವೇತನ ಪಡೆಯುವವರನ್ನು _______ ಎಂದು ಕರೆಯುತ್ತಾರೆ.
2. ಕೃಷಿಯೇತರ ಕಾರ್ಮಿಕರನ್ನು _______ ಎಂದು ಕರೆಯುತ್ತೇವೆ.
3. 2016 ಮೇ ತಿಂಗಳಲ್ಲಿ ಬೆಂಗಳೂರಿನಲ್ಲಿ ಗಾರ್ಮೆಂಟ್ಸ್ ನೌಕರರು _______ ನೀತಿಯ ವಿರುದ್ಧ ಹೋರಾಟ ಮಾಡಿದರು.
4. ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ ಇದೊಂದು _______ ಸಂಘಟನೆ.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಕೃಷಿ ಕಾರ್ಮಿಕರು ಎಂದರೆ ಯಾರು?
2. ಕೃಷಿ ಕಾರ್ಮಿಕರಿಗೆ ಒಂದು ಉದಾಹರಣೆ ಕೊಡಿ.
3. ಬಾಲ ಕಾರ್ಮಿಕರು ಎಂದರೇನು?
4. ಎಷ್ಟು ವರ್ಷದ ಒಳಗಿನ ಮಕ್ಕಳನ್ನು ಬಾಲ ಕಾರ್ಮಿಕರು ಎಂದು ಕರೆಯುತ್ತೇವೆ.

**III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:**

ಯಾವುದಾದರೂ ಎರಡು ಸಮಸ್ಯೆಗಳನ್ನು ತಿಳಿಸಿ.

ರ್ಮಿಕರು ಎಂದರೆ ಯಾರು? ಉದಾಹರಣೆ ಕೊಡಿ.

ಕರ ಕುರಿತು ಟಿಪ್ಪಣಿ ಬರೆಯಿರಿ.

ುವ ಯಾವುದಾದರೂ ಎರಡು ಕಾರ್ಮಿಕ ಚಳುವಳಿಗಳನ್ನು ತಿಳಿಸಿ.

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಕಾರ್ಮಿಕರ ವಿಧಗಳನ್ನು ವಿವರಿಸಿ.
2. ಕಾರ್ಮಿಕ ಚಳುವಳಿಯ ಯಾವುದಾದರೂ ನಾಲ್ಕು ಅನುಕೂಲ ಮತ್ತು ಅನಾನುಕೂಲಗಳನ್ನು ಪಟ್ಟಿಮಾಡಿ.
3. ಕಾರ್ಮಿಕ ಚಳುಚಳಿಯ ಬಗ್ಗೆ ಟಿಪ್ಪಣಿ ಬರೆಯಿರಿ.
4. ಕಾರ್ಮಿಕರು ಎದುರಿಸುತ್ತಿರುವ ಸಮಸ್ಯೆಗಳು ಯಾವುವು?

**ಸಲಹಾತ್ಮಕ ಚಟುವಟಿಕೆಗಳು:**

1. ಕೃಷಿ ಕಾರ್ಮಿಕರು ಮಾಡುವ ಕೆಲಸಗಳನ್ನು ಪಟ್ಟಿಮಾಡಿ.
2. ನಿಮ್ಮ ಸ್ಥಳೀಯ ಪ್ರದೇಶದಲ್ಲಿರುವ ಕಾರ್ಖಾನೆಗೆ ಭೇಟಿ ನೀಡಿ, ಕಾರ್ಮಿಕರ ಸ್ಥಿತಿಗತಿಗಳನ್ನು ದಾಖಲೀಕರಿಸಿ.

## ಅಧ್ಯಾಯ- 9 **ಭಾರತೀಯ ಸಮಾಜದ ಮೇಲೆ ಜಾಗತೀಕರಣದ ಪ್ರಭಾವ (Impact of Globalization on Indian Society)**

**ಕಲಿಕಾಂಶಗಳು:**

1. ಹೊಸ ಆರ್ಥಿಕ ನೀತಿಯ ಬಗ್ಗೆ ತಿಳಿಯೋಣ.
2. ಜಾಗತೀಕರಣದ- ಅರ್ಥ, ಲಕ್ಷಣಗಳು.
3. ಉದಾರೀಕರಣ- ಅರ್ಥ, ಲಕ್ಷಣಗಳು.
4. ಖಾಸಗೀಕರಣ- ಅರ್ಥ, ಲಕ್ಷಣಗಳು.
5. ಜಾಗತೀಕರಣದ ಅನುಕೂಲಗಳು ಮತ್ತು ಅನಾನುಕೂಲಗಳು.

### 9.1 ಹೊಸ ಆರ್ಥಿಕ ನೀತಿ:

ಸ್ವಾತಂತ್ರ್ಯಬಂದ ದಿನದಿಂದ ಭಾರತವು ಮಿಶ್ರ ಆರ್ಥಿಕ ನೀತಿಯನ್ನು ಅನುಸರಿಸುತ್ತಿತ್ತು. ಮಿಶ್ರ ಆರ್ಥಿಕ ನೀತಿ ಎಂದರೆ ಸಾರ್ವಜನಿಕ ಆಸ್ತಿ ಮತ್ತು ಸಂಪನ್ಮೂಲಗಳು ಸರ್ಕಾರ ಮತ್ತು ಖಾಸಗಿ ಒಡೆತನದಲ್ಲಿರುವುದು. ಆಮದು ಮತ್ತು ರಫ್ತಿನ ಮೇಲೆ ಹೆಚ್ಚು ನಿರ್ಬಂಧಗಳನ್ನು ಹೊಂದಿರುವುದು. ಮಾರುಕಟ್ಟೆಯ ಮೇಲೆ ಸರ್ಕಾರದ ನಿಯಂತ್ರಣ, ಇತ್ಯಾದಿ.

ಇದರಿಂದಾಗಿ ಭಾರತದಲ್ಲಿ ಆರ್ಥಿಕ ಉತ್ಪಾದನೆಯು ಹೆಚ್ಚಳವಾಗಲಿಲ್ಲ. ಸರ್ಕಾರಿ ಒಡೆತನದಲ್ಲಿದ್ದ ಕಾರ್ಖಾನೆಗಳು ತಮ್ಮ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಲಿಲ್ಲ. ಈ ಎಲ್ಲಾ ಕಾರಣಗಳಿಗಾಗಿ ಮಿಶ್ರ ಆರ್ಥಿಕ ನೀತಿಯು ಟೀಕೆಗೆ ಒಳಗಾಗಿತ್ತು. ಅಂದರೆ 1950- 1990 ರ ಸಮಯದಲ್ಲಿ ಭಾರತದ ಬಂಡವಾಳ ಶೇ. 3.5 ರಷ್ಟು ದಾಟಿರಲಿಲ್ಲ. ಕಾರಣ ಬಂಡವಾಳ ಹೂಡಿಕೆ ಮತ್ತು ಉತ್ಪಾದನೆ ಮೇಲೆ ಇದ್ದ ನಿಯಂತ್ರಣ. ಯಾಕೆಂದರೆ ಉತ್ಪಾದನೆಯ ಮೇಲಿನ ನಿಯಂತ್ರಣದಿಂದ ಉತ್ಪಾದನೆ ಕುಸಿಯಿತು. ತಂತ್ರಜ್ಞಾನ ಬೆಳವಣಿಗೆ ಯಾಗಲಿಲ್ಲ. ದೇಶಕ್ಕೆ ಆರ್ಥಿಕ ನಷ್ಟ ಎದುರಾಯಿತು. ಭಾರತ ಐ. ಎಂ. ಫ್. ಬಳಿ ನೆರವು ಪಡೆದಾಗ ಅದು ಜಾಗತೀಕರಣ ನೀತಿಯನ್ನು ಜಾರಿಗೆ ತರಲು ಸಲಹೆ ನೀಡಿತು. ಈ ಸಲಹೆಯ ಫಲವಾಗಿ ಭಾರತವು ಆರ್ಥಿಕ ನೀತಿಯೊಂದನ್ನು ಜಾರಿಗೆ ತಂದಿತು. ಆ ನೀತಿಯೇ ಹೊಸ ಆರ್ಥಿಕ ನೀತಿ. ಆಗ ಪಿ. ವಿ. ನರಸಿಂಹರಾವ್‌ರವರು ಪ್ರಧಾನ ಮಂತ್ರಿ ಆಗಿದ್ದರು ಮತ್ತು ಮನಮೋಹನ್‌ಸಿಂಗ್ ಹಣಕಾಸು ಮಂತ್ರಿಯಾಗಿದ್ದರು.

### 9.2 ಜಾಗತೀಕರಣದ- ಅರ್ಥ ಮತ್ತು ಲಕ್ಷಣಗಳು:

**ಅರ್ಥ:**

ಮಕ್ಕಳೇ ರಮೇಶ. ರೀಟಾ, ರಹೀಮ ಎಂಬುವರು ಬೆಂಗಳೂರಿನಲ್ಲಿ ಬಟ್ಟೆ ತಯಾರಿಸುವ ಕಂಪನಿ ಪ್ರಾರಂಭಿಸಿದರು. ಮೊದಲು ಉತ್ಪಾದನೆಯಾದ ವಸ್ತುಗಳನ್ನು ಬೆಂಗಳೂರಿನಲ್ಲಿ ಮಾರಾಟ ಮಾಡತೊಡಗಿದರು. ವರ್ಷದಲ್ಲಿ ಉತ್ಪಾದನೆ ಹೆಚ್ಚಾಯಿತು. ಇದರಿಂದ ಮಾರಾಟನ್ನು ಬೇರೆ ರಾಜ್ಯಗಳಾದ ಬಾಂಬೆ, ಹೈದರಾಬಾದ್, ದೆಹಲಿ ಮುಂತಾದ ಕಡೆ ಮಾಡತೊಡಗಿದರು. ಉತ್ಪಾದನೆ ಹೆಚ್ಚಾದಂತೆ ಮಾರಾಟ ಮತ್ತಷ್ಟು ಹೆಚ್ಚಿತ್ತು. ಆಗ ತಮ್ಮ ಮಾರಾಟವನ್ನು ಅಮೇರಿಕಾ. ಚೀನಾದಂತಹ ವಿದೇಶಗಳಲ್ಲಿ ಮಾಡತೊಡಗಿದರು. ಇದರಿಂದ ನಿಮಗೆ ಏನು ತಿಳಿಯಿತು? ನೀವು ಇರುವ ಸ್ಥಳದಲ್ಲಿ ಉತ್ಪಾದಿಸಿದ ವಸ್ತುಗಳನ್ನು ಬೇರೆ ಬೇರೆ ಸ್ಥಳ, ದೇಶಗಳಲ್ಲಿ ಮಾರಾಟ ಮಾಡಬಹುದು ಎಂಬುದು ತಿಳಿಯಲಿಲ್ಲವೇ? ಹಾಗಿದ್ದರೆ ಈ ವ್ಯವಸ್ಥೆಯನ್ನು ಏನೆಂದು ಕರೆಯುತ್ತೀರಾ? ಈ ವ್ಯವಸ್ಥೆಯನ್ನು ನಾವು ಜಾಗತೀಕರಣ ಎಂದು ಕರೆಯಬಹುದು. ಅಂದರೆ ಸ್ಥಳೀಯ ಮಟ್ಟದಲ್ಲಿ ಉತ್ಪಾದಿಸಿದ ವಸ್ತುಗಳನ್ನು ವಿಶ್ವದ ಇತರ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದೇ ಜಾಗತೀಕರಣ.

ಜಾಗತೀಕರಣ ಎಂಬ ಕನ್ನಡ ಪದವು ಇಂಗ್ಲೀಷ್ ಪದವಾದ Globalisation ನ ಅನುವಾದವಾಗಿದೆ. ಈ ಜಾಗತೀಕರಣದ ಬಗ್ಗೆ ಸಮಾಜಶಾಸ್ತ್ರಜ್ಞರು, ಶಬ್ದಕೋಶ, ಬ್ಯಾಂಕ್ ವರದಿಗಳು ತಮ್ಮ ವಿವರಣೆಯನ್ನು ನೀಡಿದ್ದಾರೆ ಅವು ಯಾವುವೆಂದರೆ.

**ಸಮಾಜಶಾಸ್ತ್ರ ಕೋಲಿನ್ಸ್ ಪದಕೋಶದ ಪ್ರಕಾರ:** "ಖಾಸಗೀ ಬಂಡವಾಳದ ಘಟಕಗಳ ಮೂಲಕ ಜಾಗತಿಕ ಆರ್ಥಿಕ ಚಟುವಟಿಕೆಗಳನ್ನು ಸಂಯೋಜನೆ ಮಾಡುವುದಾಗಿದೆ".

**ವಿಶ್ವ ಬ್ಯಾಂಕಿನ ವರದಿ ಹೇಳಿರುವಂತೆ:** "ಜಗತ್ತಿನ ಅರ್ಥವ್ಯವಸ್ಥೆಗಳ ಒಂದುಗೂಡುವಿಕೆಯ ವ್ಯವಸ್ಥೆ ಎಂದಿದ್ದಾರೆ".

ಒಟ್ಟಾರೆಯಾಗಿ ಜಾಗತೀಕರಣ ಎಂದರೆ ಉತ್ಪಾದಿತ ಜ್ಞಾನ, ವಿಚಾರಗಳು ಮತ್ತು ಭಾಷೆಗಳು, ಪ್ರಪಂಚದ್ಯಾಂತ ವಿಸ್ತಾರವಾಗುವುದಾಗಿದೆ.

## *ಜಾಗತೀಕರಣದ ಲಕ್ಷಣಗಳು:*

1. **ಮಾರುಕಟ್ಟೆ ವಿಸ್ತರಣೆ:**

ಜಾಗತೀಕರಣ ಸಾರ್ವತ್ರಿಕವಾದುದು. ಸ್ಥಳೀಯ ಮಟ್ಟದಲ್ಲಿ ಉತ್ಪಾದಿಸಿದ ಉತ್ಪನ್ನಗಳನ್ನು ದೇಶ, ವಿದೇಶಗಳಲ್ಲಿ ಮಾರಾಟ ಮಾಡಬೇಕಾದರೆ ಮಾರುಕಟ್ಟೆಗಳ ವಿಸ್ತರಣೆ ಬೇಕಾಗುತ್ತದೆ. ಇದು ಜಾಗತೀಕರಣದಿಂದ ಸಾಧ್ಯವಾಗುತ್ತದೆ.

2. **ಮುಕ್ತ ಮಾರುಕಟ್ಟೆ:**

ಗಡಿಗಳ ನಿರ್ಬಂಧ ದೇಶದಲ್ಲಿ ಉತ್ಪಾದಿತ ವಸ್ತುಗಳನ್ನು ವಿದೇಶಗಳಲ್ಲಿ, ವಿದೇಶಗಳಲ್ಲಿ ಉತ್ಪಾದಿಸಿದ ವಸ್ತುಗಳನ್ನು ಸ್ವದೇಶದಲ್ಲಿ ಮಾರಾಟ ಮಾಡಲು ಜಾಗತೀಕರಣ ಮುಕ್ತ

ಮಾರುಕಟ್ಟೆ ವ್ಯವಸ್ಥೆಯನ್ನು ಮಾಡಿದೆ.

3. **ಸರುಕುಗಳ ಲಭ್ಯತೆ:**

ಜಾಗತೀಕರಣದಿಂದ ಏಕ ಕಾಲದಲ್ಲಿ ಒಂದೇ ಸ್ಥಳದಲ್ಲಿ ಜನರಿಗೆ ಬೇಕಾದ ಎಲ್ಲಾ ಸರುಕುಗಳ ಲಭ್ಯತೆ ಸಾಧ್ಯವಾಗುತ್ತದೆ. ವಸ್ತುಗಳನ್ನು ಕೊಳ್ಳಲು ಬೇರೆಡೆ ಹೊಗುವಂತಿಲ್ಲ. ಉದಾಹರಣೆ: ಮಾಲ್‌ಗಳು, ಬಿಗ್ ಬಜಾರ್ ಮುಂತಾದವು.

4. **ಬೆಲೆ ನಿಯಂತ್ರಣ:**

ವಸ್ತುಗಳ ನಡುವೆ ಪೈಪೋಟಿ ಇರುವುದರಿಂದ ತಾ ಮುಂದು ನಾ ಮುಂದು ಎಂದು ಮಾಲೀಕರು ಬೆಲೆಯನ್ನು ನಿಯಂತ್ರಣ ಮಾಡುತ್ತಾರೆ. ಯಾಕೆಂದರೆ ನನ್ನ ಕಂಪನಿ ಉತ್ಪಾದಿಸಿದ ವಸ್ತುಗಳು ಖರ್ಚಾಗಲಿ ಎಂದು ಬೆಲೆ ನಿಯಂತ್ರಿಸುತ್ತಾರೆ.

5. **ಆಯ್ಕೆಯ ಸ್ವಾತಂತ್ರ:**

ಏಕ ಕಾಲದಲ್ಲಿ ಎಲ್ಲಾ ವಸ್ತುಗಳು ದೊರೆಯುವುದರಿಂದ ಕೊಳ್ಳುವವರಿಗೆ ಯಾವ ವಸ್ತುಗಳನ್ನು ಕೊಳ್ಳಬೇಕು ಎಂಬ ಸ್ವಾತಂತ್ರ್ಯ ದೊರೆಯುತ್ತದೆ.

6. **ಅಂತರರಾಷ್ಟ್ರೀಯ ಸಹಕಾರ:**

ಉತ್ಪಾದನಾ ವಸ್ತುಗಳು ದೇಶ ದೇಶಗಳ ನಡುವೆ ಮಾರಾಟವಾಗುವುದರಿಂದ ಅಂತರ ರಾಷ್ಟ್ರೀಯ ಸಹಕಾರ ಏರ್ಪಡುತ್ತದೆ.

### 9.3 ಉದಾರೀಕರಣ- ಅರ್ಥ ಲಕ್ಷಣಗಳು:

ಕಮಲಮ್ಮ ಎಂಬುವವರು ಕಬ್ಬಿಣ ಕಾರ್ಖಾನೆಯ ಮಾಲೀಕರಾಗಿದ್ದಾರೆ. ಇವರು ತಮ್ಮ ಕಾರ್ಖಾನೆಯಲ್ಲಿ ಉತ್ಪಾದನೆಯಾದ ವಸ್ತುಗಳನ್ನು ದೇಶ ವಿದೇಶಗಳಲ್ಲಿ ರಫ್ತು ಮಾಡಲು ಸರ್ಕಾರದ ನೀತಿ ನಿಯಮಗಳು ಅಡ್ಡಿಯಾಗಿದ್ದವು. ಕಮಲಮ್ಮನವರಿಗೆ ತುಂಬಾ ನಷ್ಟವಾಯಿತು. ಇದರಿಂದ ಬೇಸತ್ತು ಕಾರ್ಖಾನೆ ಮುಚ್ಚಲು ಮುಂದಾದರು. ಕಾರಣ ಸರ್ಕಾರದ ನೀತಿ ನಿಯಮಗಳು ಹೀಗೆ ಕಮಲಮ್ಮರವರ ಕಾರ್ಖಾನೆ ಮಾತ್ರ ಅಲ್ಲ. ಹಲವಾರು ಕಾರ್ಖಾನೆಗಳು ಮುಚ್ಚ ತೊಡಗಿದವು. ಇದರಿಂದ ಸರ್ಕಾರಕ್ಕೆ ಆದಾಯ ಕುಂಠಿತವಾಗತೊಡಗಿತು. ಇದನರಿತ ಸರ್ಕಾರ ತನ್ನ ನಿಯಂತ್ರಣವನ್ನು ಸಡಿಲಗೊಳಿಸಿ ಮುಕ್ತವಾಗಿ ದೇಶ ವಿದೇಶಗಳಲ್ಲಿ ರಫ್ತು ಮಾಡಲು ಅವಕಾಶ ಮಾಡಿಕೊಟಿತ್ತು. ಇದನ್ನು ನಾವು ಉದಾರೀಕರಣ ಎಂದು ಕರೆಯುತ್ತೇವೆ. ಅಂದರೆ ಆಮದು ಮತ್ತು ರಫ್ತಿನ ಮೇಲೆ ಇರುವ ನಿರ್ಬಂಧಗಳನ್ನು ತೆಗೆದು ಸುಲಭವಾಗಿ ಸರುಕು ಮತ್ತು ಸೇವೆಗಳನ್ನು ಆಮದು ಮತ್ತು ರಫ್ತು ಮಾಡಿಕೊಳ್ಳುವುದನ್ನು ಉದಾರೀಕರಣ ಎನ್ನುತ್ತೇವೆ.

ಉದಾರೀಕರಣದ ಲಕ್ಷಣಗಳು:

*ಉದಾರೀಕರಣದ ಪ್ರಮುಖ ಲಕ್ಷಣಗಳೆಂದರೆ:*

1. **ಪರವಾನಗಿ ಸರಳೀಕರಣ:**

1950 ರ ಸಮಯದಲ್ಲಿ ಸರ್ಕಾರ ಉದ್ಯಮವನ್ನು ಪ್ರಾರಂಭಿಸಲು ಕಟ್ಟುನಿಟ್ಟಿನ ಪರವಾನಗಿ ನೀತಿಯನ್ನು ಜಾರಿಗೊಳಿಸಿತ್ತು. ಇದರಿಂದ ಹೊಸ ಹೊಸ ಉದ್ಯಮಿಗಳು ಉದ್ಯಮ ಸ್ಥಾಪಿಸುತ್ತಿರಲಿಲ್ಲ. ಇದನರಿತ ಸರ್ಕಾರ ಹೊಸ ಉದ್ಯಮ ಕೈಗೊಳ್ಳಲು ಇರುವ ಪರವಾನಗಿ ನೀತಿಯನ್ನು ಸರಳೀಕರಣಗೊಳಿಸಿತ್ತು. ನಂತರ ಉತ್ಪಾದನಾ ಪ್ರಮಾಣ ಹೆಚ್ಚಾಯಿತು.

2. **ಮುಕ್ತ ಬಂಡವಾಳ ಮಾರುಕಟ್ಟೆಗಳು:**

ಉದಾರೀಕರಣ ನೀತಿಯಿಂದ ಮಾರುಕಟ್ಟೆಗಳು ಖಾಸಗೀ ಉದ್ಯಮಗಳಿಗೂ ಮುಕ್ತಗೊಂಡ ಹಿನ್ನಲೆಯಲ್ಲಿ ಬಂಡವಾಳ ಸಂಚಯನ ಹೆಚ್ಚಾಯಿತು. ತನಗೆ ಬೇಕಾದಷ್ಟು ಬಂಡವಾಳ, ಷೇರುಗಳು ಮತ್ತು ಸಾಲಪತ್ರಗಳನ್ನು ಇತರರಿಗೆ ವಿತರಿಸುವುದರ ಮೂಲಕ ಬಂಡವಾಳ ಹೆಚ್ಚಾಯಿತು.

3. **ಸ್ಪರ್ಧೆಗೆ ಅವಕಾಶ:**

ಉದಾರೀಕರಣ ನೀತಿಯಿಂದ ಉದ್ಯಮಿಗಳ ನಡುವೆ ಸ್ಪರ್ಧೆ ಪ್ರಾರಂಭವಾಯಿತು, ಇದರಿಂದ ವಸ್ತುಗಳ ಗುಣಮಟ್ಟ ಸುಧಾರಣೆಯಾಯಿತ್ತು. ಈ ಸ್ಪರ್ಧೆಯಿಂದ ಸಾಮಾನ್ಯ ಜನರಿಗೂ ಗುಣಮಟ್ಟದ ವಸ್ತುಗಳು ದೊರೆಯುವಂತಾಯಿತು.

4. **ಸ್ವಂತ ನಿರ್ಧಾರ ತೆಗೆದುಕೊಳ್ಳುವುದು:**

ಮೊದಲು ಉದ್ಯಮಗಳು ಸರ್ಕಾರದ ಅದೀನದಲ್ಲಿ ಇದ್ದವು ಆಗ ಯಾವುದೇ ತೀರ್ಮಾನ ತೆಗೆದುಕೊಳ್ಳಲು ಸಾಧ್ಯವಿರಲಿಲ್ಲ. ಆದರೆ ಈ ನೀತಿಯಿಂದ ಉದ್ಯಮಿಗಳು ಬೆಲೆ, ವಸ್ತುಗಳ ಉತ್ಪಾದನೆ ಮುಂತಾದವುಗಳಲ್ಲಿ ಸ್ವಂತ ನಿರ್ಧಾರ ತೆಗೆದುಕೊಳ್ಳಲು ಸಹಕಾರಿಯಾಯಿತು.

5. **ವಿದೇಶಿ ವಿನಿಮಯ ನೀತಿ ಸಡಲೀಕರಣ:**

ವಿದೇಶಿ ವಿನಿಮಯ ನೀತಿ ಸಡಲೀಕರಣ ನೀತಿಯಿಂದ ಮಾಲೀಕನಿಗೆ ತನ್ನ ಕಂಪನಿಗೆ ಉಪಕರಣಗಳು ಅಗತ್ಯವಿದ್ದಲ್ಲಿ ವಿದೇಶಿ ಮಾರುಕಟ್ಟೆಯಿಂದ ತರಲು ಸರ್ಕಾರ ಅನುಮತಿ, ಪರವಾನೆಗಾಗಿ ಕಾಯಬೇಕಾಗಿಲ್ಲ. ಮಾರುಕಟ್ಟೆ ಬೆಲೆಗೆ ಬೇಕಾದ ವಸ್ತುಗಳನ್ನು ಆಮದು ಮಾಡಿಕೊಳ್ಳಲು ಅವಕಾಶವಾಯಿತು. ಇದರಿಂದ ಉದ್ಯಮ ಸ್ಥಾಪಿಸುವವರಿಗೆ ಹೆಚ್ಚು ಲಾಭವಾಯಿತು.

## 9.4 ಖಾಸಗೀಕರಣದ- ಅರ್ಥ ಮತ್ತು ಲಕ್ಷಣಗಳು:

ನಾವು ಓಡಾಡಲು ರಸ್ತೆಗಳು ಬೇಕು. ರಸ್ತೆಗಳು ಕಲ್ಲು ಮುಳ್ಳುಗಳಿಂದ ಕೂಡಿದ್ದರೆ ಚೆಂದವೇ? ಇಲ್ಲ. ಹಾಗಿದ್ದರೆ ಹೇಗೆ ಇರಬೇಕು? ಡಾಂಬರೀಕರಣವಾಗಿದ್ದರೆ ಚೆಂದ ಅಲ್ಲವೇ? ಡಾಂಬರೀಕರಣ ಮಾಡುವವರು ಯಾರು? ಸರ್ಕಾರ ಮಾಡಬೇಕು. ಸರ್ಕಾರ ಎಲ್ಲಾ ರಸ್ತೆಗಳನ್ನು ಡಾಂಬರೀಕರಣವನ್ನು ನಿಂತು ಮಾಡಿಸಲು ಸಾಧ್ಯವೇ? ಇಲ್ಲ. ಹಾಗಿದ್ದರೆ ಯಾರು ಮಾಡುತ್ತಾರೆ? ಅಂದರೆ ಸರ್ಕಾರ ಖಾಸಗಿ ಬಂಡವಾಳಗಾರರಿಗೆ ರಸ್ತೆ ಕೆಲಸವನ್ನು ವಹಿಸುತ್ತದೆ. ಹೀಗೆ ಸಾರ್ವಜನಿಕ ಕೆಲಸವನ್ನು ಖಾಸಗೀಕರಣ ಎಂದು ಕರೆಯುತ್ತೇವೆ.

ಸಾರ್ವಜನಿಕ ಉದ್ದಿಮೆಗಳನ್ನು ಖಾಸಗಿಯವರಿಗೆ ವಹಿಸುವುದು ಎಂದರ್ಥ, ಸರ್ಕಾರದ ಗೌಪ್ಯವಾದ ಕೆಲವು ವಿಭಾಗಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡು ಉಳಿದೆಲ್ಲ ಕ್ಷೇತ್ರಗಳನ್ನು ಖಾಸಗಿಯವರಿಗೆ ಅವಕಾಶ ಕಲ್ಪಿಸಿಕೊಡಲಾಯಿತ್ತು.

**ಸ್ಟೀವ್ ಹೆಚ್ ಹ್ಯಾಂಕ್ ರವರ ಪ್ರಕಾರ:** "ಎಲ್ಲಾ ಉಧ್ಯಮಗಳನ್ನು ಖಾಸಗೀ ವಲಯಕ್ಕೆ ವರ್ಗಾವಣೆ ಮಾಡುವುದೇ ಖಾಸಗೀಕರಣ".

**ಸಮಾಜಶಾಸ್ತ್ರ ಕೊಲಿನ್ಸ್ ನಿಘಂಟಿನ ಪ್ರಕಾರ:** "ಖಾಸಗಿ ನಿಯಂತ್ರಣಕ್ಕೆ ಎಲ್ಲಾ ಬಗೆಯ ಸಾರ್ವಜನಿಕ ಒಡೆತನದ ಉದ್ದಿಮೆಗಳನ್ನು ವರ್ಗಾವಣೆ ಮಾಡುವುದಾಗಿದೆ".

**ಖಾಸಗೀಕರಣ ಎಂದರೆ:** ನಿರ್ವಹಣೆ ಮತ್ತು ಆದಾಯದ ದೃಷ್ಟಿಯಿಂದ ಸಾರ್ವಜನಿಕ ಅಥವಾ ಸರ್ಕಾರಿ ಉದ್ದಿಮೆಗಳನ್ನು ಖಾಸಗಿ ಒಡೆತನದ ಸಂಸ್ಥೆಗಳಿಗೆ ವಹಿಸುವುದನ್ನು ಖಾಸಗೀಕರಣ ಎಂದು ಕರೆಯಬಹುದು.

**ಖಾಸಗೀಕರಣದ ಲಕ್ಷಣಗಳು:**

1. **ಬಂಡವಾಳ ಕ್ರೂಢೀಕರಣ:**

ಸರ್ಕಾರ ಯಾವ ಕಂಪನಿಯನ್ನು ನಡೆಸಲು ಸಾಧ್ಯವಾಗುವುದಿಲ್ಲವೋ ಅಂತವುಗಳನ್ನು ಖಾಸಗಿಯವರಿಗೆ ವಹಿಸುತ್ತದೆ. ಇದರಿಂದ ಸರ್ಕಾರಕ್ಕೆ ಆದಾಯ ಬರುತ್ತದೆ. ಹೀಗೆ ಯಾವುದೇ ಖರ್ಚಿಲ್ಲದೆ ಸಂಪನ್ಮೂಲ ಬರುವುದರಿಂದ ಬಂಡವಾಳ ಕ್ರೂಢೀಕರಣವಾಗುತ್ತದೆ.

2. **ಉದ್ಯೋಗ ಅವಕಾಶವನ್ನು ಕಲ್ಪಿಸುವುದು:**

ಸಾರ್ವಜನಿಕ ಕ್ಷೇತ್ರದ ಕೆಲವು ಉದ್ದಿಮೆಗಳು ಸರಿಯಾದ ನಿರ್ವಹಣೆ ಇಲ್ಲದೆ ನಷ್ಟ ಅನುಭವಿಸುತ್ತಿವೆ. ಅಂತಹ ಉದ್ದಿಮೆಗಳನ್ನು ಖಾಸಗಿ ಬಂಡವಾಳಗಾರರಿಗೆ ವಹಿಸಿದರೆ ಅವರು ಚೆನ್ನಾಗಿ ಮುಂದುವರೆಸಿಕೊಂಡು ಬರುತ್ತಾರೆ. ಇದರಿಂದ ಉದ್ಯೋಗ ಸೃಷ್ಟಿಯಾಗುತ್ತದೆ. ನಿರುದ್ಯೋಗಿಗಳಿಗೆ ಉದ್ಯೋಗ ದೊರೆಯುತ್ತದೆ.

3. **ಸಂಪನ್ಮೂಲಗಳ ಸ್ಥಳಕೆ:**

ಖಾಸಗೀಕರಣದಲ್ಲಿ ಸಂಪನ್ಮೂಲಗಳು ಸರಿಯಾಗಿ ಸದ್ಬಳಕೆಯಾಗುತ್ತವೆ. ಕಾರಣ ಉದ್ಧಮೆದಾರನು ಲಾಭ ಪಡೆಯುವ ಉದ್ದೇಶದಿಂದ ಬಂಡವಾಳ ಹೂಡುತ್ತಾನೆ. ಆಗ ಯಾವುದೇ ವಸ್ತುಗಳು ಅನುಪಯೋಗವಾಗದಂತೆ ನೋಡಿಕೊಳ್ಳುತ್ತಾನೆ. ಇದರಿಂದ ಸಂಪನ್ಮೂಲಗಳ ಬಳಕೆ ಸರಿಯಾಗಿ ಸದ್ಬಳಕೆ ಯಾಗುತ್ತವೆ.

4. **ಪ್ರತಿಭೆಗೆ ತಕ್ಕ ಪ್ರತಿಫಲ:**

ಖಾಸಗೀಕರಣದಲ್ಲಿ ಯಾವ ಕಾರ್ಮಿಕನಿಗೆ ಪ್ರತಿಭೆ ಇರುತ್ತದೋ ಅಂತಹ ಕಾರ್ಮಿಕ ಮಾತ್ರ ಬದುಕಲು ಸಾಧ. ಯಾಕೆಂದರೆ ಉದ್ದಿಮೆದಾರನು ತನ್ನ ಉಧಮದಲ್ಲಿ ಕಾರ್ಯ ನಿರ್ವಹಿಸಲು ಸಾಮರ್ಥ್ಯ ಇರುವ ವ್ಯಕ್ತಿಯನ್ನು ಮಾತ್ರ ಕೆಲಸಕ್ಕೆ ನೇಮಿಸಿಕೊಳ್ಳುತ್ತಾನೆ. ಆದ್ದರಿಂದ ಪ್ರತಿಭೆ ಇದ್ದರೆ ಮಾತ್ರ ಖಾಸಗೀಕರಣದಲ್ಲಿ ತಕ್ಕ ಪ್ರತಿಫಲ ಪಡೆಯಬಹುದು.

## 9.5 ಜಾಗತೀಕರಣದ ಅನುಕೂಲಗಳು ಮತ್ತು ಅನಾನುಕೂಲಗಳು

1. ಉದ್ಯೋಗ ಸೃಷ್ಟಿ ಜಾಗತೀಕರಣದಿಂದ ವಿದೇಶಿಯ ಕಂಪನಿಗಳು ನಮ್ಮ ದೇಶದಲ್ಲಿ ಬಂಡವಾಳ ಹೂಡಿ ಹೆಚ್ಚು ಹೆಚ್ಚು ಉದ್ಯೋಗಗಳನ್ನು ಸೃಷ್ಟಿಸುತ್ತವೆ.

2. ಈ ಪ್ರಕ್ರಿಯೆಯಿಂದ ಬಂಡವಾಳ ಹೂಡುವ ಬಂಡವಾಳಗಾರರಿಗೆ ತಮಗೆ ಇಷ್ಟವಾದ ಪ್ರದೇಶದಲ್ಲಿ ಬಂಡವಾಳ ಹೂಡುವ ಅವಕಾಶ ದೊರೆಯುವುದರಿಂದ, ಹೂಡಿಕೆಗೆ ಮುಕ್ತ ಅವಕಾಶ ದೊರೆಯುತ್ತದೆ.

3. ನಿರ್ದಿಷ್ಟ ಸ್ಥಳದಲ್ಲಿ ಉತ್ಪಾದಿಸಿದ ವಸ್ತುಗಳನ್ನು ಜಗತ್ತಿನಾದ್ಯಂತ ಮಾರಾಟ ಮಾಡುವುದರಿಂದ ಆ ವಸ್ತುಗಳನ್ನು ಜಾಗತಿಕ ಮಟ್ಟದಲ್ಲಿ ಗುರುತಿಸಲು ಸಹಕಾರಿಯಾಗುತ್ತದೆ. ಉದಾಹರಣೆ ಚೀನಾದ ಗೊಂಬೆಗಳು, ಭಾರತದ ಸಿದ್ಧ ಉಡುಪುಗಳು.

4. ತಾವು ಉತ್ಪಾದಿಸಿದ ವಸ್ತುಗಳಿಗೆ ಜಾಗತಿಕ ಮಟ್ಟದಲ್ಲಿ ಮಾರುಕಟ್ಟೆ ದೊರೆಯುವುದರಿಂದ ದೇಶ ದೇಶಗಳ ನಡುವೆ ಸೌಹಾರ್ದಯುತವಾದ ಸಂಬಂಧ ಬೆಳೆಯುತ್ತದೆ. ಉದಾಹರಣೆ ಅಮೇರಿಕ ಮತ್ತು ಭಾರತದ ನಡುವಿನ ಸಂಬಂಧ.

5. ಜಾಗತೀಕರಣ ಪ್ರಕ್ರಿಯೆಯಿಂದ ಹೊಸ ಹೊಸ ಸಂಸ್ಕೃತಿಗಳ ವಿನಿಮಯವಾಗುತ್ತದೆ.

### *ಅನಾನುಕೂಲಗಳು*

1. ಬಂಡವಾಳ ಹೂಡಿಕೆಗೆ ತಮಗೆ ಅನುಕೂಲವಾಗುವ ಪ್ರದೇಶ ಆಯ್ಕೆ ಮಾಡಿಕೊಳ್ಳುವುದರಿಂದ ಆ ಪ್ರದೇಶದ ಪರಿಸರ ನಾಶವಾಗುತ್ತದೆ.
2. ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿ ನಿಯಮಗಳನ್ನು ಸರಳೀಕರಣಗೊಳಿಸುವುದರಿಂದ ನೀತಿ ಬಾಹಿರ ಪದ್ಧತಿಗಳು ಹೆಚ್ಚಾಗುತ್ತಿವೆ.
3. ವಿದೇಶಿ ಕಂಪನಿಗಳು ಭಾರತದಲ್ಲಿ ಬಂಡವಾಳ ಹೂಡಲು ಬರುವುದರಿಂದ ನಮ್ಮ ದೇಶದ ಸಂಪನ್ಮೂಲಗಳು ಇತರ ದೇಶಗಳಿಗೆ ಹರಿದು ಹೋಗುತ್ತದೆ.
4. ಬಹುರಾಷ್ಟ್ರೀಯ ಕಂಪನಿಗಳಿಂದಾಗಿ ನಮ್ಮ ದೇಶದ ಪರಮಾಧಿಕಾರ ಮತ್ತು ಸ್ವಾತಂತ್ರ್ಯಕ್ಕೆ ಧಕ್ಕೆಯಾಗುವ ಸಾಧ್ಯತೆ ಇದೆ.
5. ಬಂಡವಾಳ ಶಾಹಿಗಳಿಗೆ ಅನುಕೂಲವಾಗುತ್ತದೆ.

## ಸಾರಾಂಶ

1. ಸ್ಥಳೀಯ ಮಟ್ಟದಲ್ಲಿ ಉತ್ಪಾದಿಸಿದ ವಸ್ತುಗಳನ್ನು ವಿಶ್ವದ ಇತರ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದೇ ಜಾಗತೀಕರಣ.
2. ವಿಶ್ವ ಬ್ಯಾಂಕಿನ ವರದಿ ಹೇಳಿರುವಂತೆ ಜಗತ್ತಿನ ಅರ್ಥವ್ಯವಸ್ಥೆಗಳ ಒಂದುಗೂಡುವಿಕೆಯ ವ್ಯವಸ್ಥೆಯೇ ಜಾಗತೀಕರಣ.
3. ಆಮದು ಮತ್ತು ರಫ್ತಿನ ಮೇಲೆ ಇರುವ ನಿರ್ಬಂಧಗಳನ್ನು ತೆಗೆದು ಸುಲಭವಾಗಿ ಸರುಕು ಮತ್ತು ಸೇವೆಗಳನ್ನು ಆಮದು ಮತ್ತು ರಫ್ತು ಮಾಡಿಕೊಳ್ಳುವುದೇ ಉದಾರೀಕರಣ.
4. ಪರವಾನಗಿ ಸರಳೀಕರಣ, ಮುಕ್ತ ಬಂಡವಾಳ ಮಾರುಕಟ್ಟೆಗಳು, ಸ್ಪರ್ಧೆಗೆ ಅವಕಾಶ, ಸ್ವಂತ ನಿರ್ಧಾರ ತೆಗೆದುಕೊಳ್ಳುವುದು, ವಿದೇಶಿ ವಿನಿಮಯ ನೀತಿ ಸಡಲೀಕರಣ ಇವುಗಳು ಉದಾರೀಕರಣದ ಪ್ರಮುಖ ಲಕ್ಷಣಗಳಾಗಿವೆ.
5. ಖಾಸಗೀಕರಣ ಎಂದರೆ ಸಾರ್ವಜನಿಕ ಉದ್ದಿಮೆಗಳನ್ನು ಖಾಸಗಿಯವರಿಗೆ ವಹಿಸುವುದು ಎಂದರ್ಥ.
6. ಸಮಾಜಶಾಸ್ತ್ರ ಕೊಲಿನ್ಸ್ ನಿಘಂಟಿನ ಪ್ರಕಾರ ಖಾಸಗಿ ನಿಯಂತ್ರಣಕ್ಕೆ ಎಲ್ಲಾ ಬಗೆಯ ಸಾರ್ವಜನಿಕ ಒಡೆತನದ ಉದ್ದಿಮೆಗಳನ್ನು ವರ್ಗಾವಣೆ ಮಾಡುವುದಾಗಿದೆ.

## ಅಭ್ಯಾಸ

**I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:**

1. ಜಾಗತೀಕರಣ ಎಂಬ ಕನ್ನಡ ಪದವನ್ನು ಇಂಗ್ಲೀಷ್ ನಲ್ಲಿ _______ ಎಂದು ಕರೆಯುತ್ತಾರೆ.
2. ಉದಾರೀಕರಣ ಎಂದರೆ _______ .
3. ಭಾರತೀಯ ಅರ್ಥವ್ಯವಸ್ಥೆಯನ್ನು _______ ಎಂಬುದಾಗಿ ಕರೆಯಲಾಗುತ್ತದೆ.
4. ಖಾಸಗೀಕರಣ ಎಂದರೆ _______ ಖಾಸಗಿಯವರಿಗೆ ವಹಿಸುವುದು ಎಂದರ್ಥ.

**II. ಒಂದು ವಾಕ್ಯದಲ್ಲಿ ಉತ್ತರಿಸಿ:**

1. ಹೊಸ ಆರ್ಥಿಕ ನೀತಿ ಎಂದರೇನು?
2. ಖಾಸಗೀಕರಣಕ್ಕೆ ಒಂದು ಉದಾಹರಣೆ ನೀಡಿ.
3. ಜಾಗತೀಕರಣ ಎಂದರೇನು?
4. ಬಂಡವಾಳ ಕ್ರೋಢೀಕರಣ ಎಂದರೇನು?

**III. ಎರಡು- ಮೂರು ವಾಕ್ಯಗಳಲ್ಲಿ ಉತ್ತರಿಸಿ:**

1. ಹೊಸ ಆರ್ಥಿಕ ನೀತಿಯ ಬಗ್ಗೆ ಟಿಪ್ಪಣಿ ಬರೆಯಿರಿ.
2. ಜಾಗತೀಕರಣದಿಂದಾಗುವ ಅನಾನುಕೂಲಗಳಾವುವು?
3. ಯಾವುದಾದರೂ ಐದು ಸ್ವದೇಶಿ ಸರಕುಗಳನ್ನು ಹೆಸರಿಸಿ.
4. ಖಾಸಗೀಕರಣದ ಬಗ್ಗೆ ಟಿಪ್ಪಣಿ ಬರೆಯಿರಿ.

I. **ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಜಾಗತೀಕರಣದ ಲಕ್ಷಣಗಳನ್ನು ವಿವರಿಸಿ.
2. ಉದಾರೀಕರಣ ಎಂದರೇನು?
3. ಭಾರತೀಯ ಸಮಾಜದ ಮೇಲೆ ಜಾಗತೀಕರಣದ ಪ್ರಭಾವನ್ನು ವಿವರಿಸಿ.
4. ಜಾಗತೀಕರಣದ ಅನುಕೂಲಗಳಾವುವು?

**ಸಲಹಾತ್ಮಕ ಚಟುವಟಿಕೆಗಳು:**

1. ನಿಮಗೆ ತಿಳಿದಿರುವ ಸ್ಥಳೀಯ ಕಂಪನಿಯ ಹೆಸರುಗಳನ್ನು ಪಟ್ಟಿ ಮಾಡಿ.
2. ಗೃಹ ಕೈಗಾರಿಕೆಗಳ ಬಗ್ಗೆ ನಿಮ್ಮ ಶಿಕ್ಷಕರ ಬಳಿ ಮಾಹಿತಿ ಪಡೆಯಿರಿ.

## ಅಧ್ಯಾಯ- 10 ಭಾರತೀಯ ಸಮಾಜಶಾಸ್ತ್ರಜ್ಞರು (Indian Soliologists)

**ಕಲಿಕಾಂಶಗಳು:**

1. ಜಿ. ಎಸ್. **ಘುರ್ಯೆ** ಯವರ ಸಾಧನೆಗಳ ಬಗ್ಗೆ ತಿಳಿಯೋಣ.
2. ಎಮ್. ಎನ್. ಶ್ರೀನಿವಾಸರವರ ಸಾಧನೆಗಳ ಬಗ್ಗೆ ತಿಳಿಯೋಣ ಇರಾವತಿ ಕರ್ವೆಯವರ ಪರಿಚಯ ಮಾಡಿಕೊಳ್ಳೋಣ.
3. ಪಾರ್ವತಮ್ಮರವರ ಬಗ್ಗೆ ಮಾಹಿತಿ ಕಲೆಹಾಕೋಣ.
4. ಪ್ರೊ. ಜೋಗನ್ ಶಂಕರ್ ರವರ ಸಾಧನೆಗಳ ಬಗ್ಗೆ ತಿಳಿದುಕೊಳ್ಳೋಣ.

### 10.1 ಜಿ. ಎಸ್. ಘುರ್ಯೆ: (1993-1984)



ಜಿ. ಎಸ್. ಘುರ್ರೆ (ಗೋವಿಂದ ಸದಾಶಿವ ಘುರ್ರೆ) ಯವರು ಭಾರತೀಯ ಸಮಾಜಶಾಸ್ತ್ರರು. ಮಹಾರಾಷ್ಟ್ರದ ಮಾಲ್ವಾನ್ ರತ್ನಗಿರಿಯಲ್ಲಿ ಡಿಸೆಂಬರ್ 12, 1893 ರಂದು ಜನ್ಮತಾಳಿದರು. ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಕಾಲೇಜು ಶಿಕ್ಷಣವನ್ನು ಮುಗಿಸಿದರು. ಇವರು ಅತ್ಯಂತ ಪ್ರತಿಭಾಶಾಲಿ ವಿದ್ಯಾರ್ಥಿಯಾಗಿದ್ದರಿಂದ ಎಂ. ಎ. ಪದವಿಯಲ್ಲಿ ಪ್ರಸಿದ್ಧವಾದ "ಕುಲಪತಿಗಳ ಚಿನ್ನದ ಪದಕ" ವನ್ನು ಪಡೆದರು. ಘುರ್ರೆಯವರ ಲೇಖನವನ್ನು ಓದಿದ ಪ್ಯಾಟ್ರಿಕ್ ಗಿಡ್ಡಿಸ್ ರವರು ಲಂಡನ್‌ನಲ್ಲಿ ವಿದೇಶಿ ವಿದ್ಯಾರ್ಥಿ ವೇತನ ಪಡೆದು ಶಿಕ್ಷಣ ಮುಂದುವರಿಸಲು ಘುರ್ರೆಯವರ ಹೆಸರನ್ನು ಶಿಫಾರಸ್ಸು ಮಾಡಿದರು. ನಂತರದ ಅಧ್ಯಯನಕ್ಕಾಗಿ ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದ ಇವರು ಪ್ರೋಫೆಸರ್ ಎಲ್. ಟಿ. ಹಾಬ್‌ಹೌಸ್ ಅವರೊಂದಿಗೆ ಒಡನಾಟ ಬೆಳೆಸಿಕೊಂಡರು. ಮಾನವಶಾಸ್ತ್ರಜ್ಞ ರಿವರ್ಸ್‌ರವರ ಬಳಿಯಲ್ಲಿ ಅಧ್ಯಯನ ಮಾಡುತ್ತಿದ್ದರು. ಆದರೆ ರಿವರ್ಸ್‌ರವರು ಆಕಾಲಿಕ ಮರಣ

ಹೊಂದಿದರು. ನಂತರ ಪ್ರೊ. ಹಡ್ಸನ್ ರವರ ಮಾರ್ಗದರ್ಶನದಲ್ಲಿ ಪಿ. ಎಚ್. ಡಿ. ಅಧ್ಯಯನವನ್ನು ಪೂರ್ಣಗೊಳಿಸಿದರು. ಭಾರತಕ್ಕೆ ಆಗಮಿಸಿದ ಮೇಲೆ ಬೊಂಬಾಯಿ ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ವಿಭಾಗದಲ್ಲಿ ಮುಖ್ಯಸ್ಥರಾಗಿ, ವಿಶ್ರಾಂತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಜಿ. ಎಸ್. ಘುರ್ರೆಯವರು ಭಾರತದಲ್ಲಿ ಸಮಾಜಶಾಸ್ತ್ರವನ್ನು ಪ್ರಾರಂಭಿಸುವುದರಲ್ಲಿ ಮುಖ್ಯ ಪಾತ್ರ ವಹಿಸಿದ್ದಾರೆ. ಆದ್ದರಿಂದ ಇವರನ್ನು 'ಭಾರತೀಯ ಸಮಾಜಶಾಸ್ತ್ರದ ಪಿತಾಮಹ' ಎಂದು ಕರೆಯಲಾಗುತ್ತದೆ.

### *ಸಮಾಜಶಾಸ್ತ್ರಕ್ಕೆ ಜಿ. ಎಸ್. ಘುರ್ಯೆ ಯವರ ಕೊಡುಗೆಗಳು:*

ೀಶಿಯಾಲಜಿಕಲ್ ಸೊಸೈಟಿ ಸಂಸ್ಥೆಯನ್ನು ಪ್ರಾರಂಬಿಸಿ, ಸೋಷಿಯಲಾಜಿಕಲ್ ಬುಲೆಟಿನ್ ನ್ನು ಆರಂಭಿಸುವುದರ ಮೂಲಕ ಸಮಾಜಶಾಸ್ತ್ರಕ್ಕೆ ಭದ್ರ ಬುನಾದಿಯನ್ನು ಹಾಕಿದರು.

ಯವರು ಭಾರತದಲ್ಲಿನ ಜಾತಿ ವ್ಯವಸ್ಥೆಯ ಬಗ್ಗೆ ಅಧ್ಯಯನ ಮಾಡಿದ್ದಾರೆ. ಜಾತಿಯ ಉಗಮ, ತಿಯ ಅಸ್ತಿತ್ವ, ಜಾತಿ ಮತ್ತು ಜನಾಂಗ, ರಾಜಕೀಯದಲ್ಲಿ ಜಾತಿಯ ಪಾತ್ರ ಮುಂತಾದವುಗಳ ಬರೆದಿದ್ದಾರೆ. ಭಾರತದ ಜಾತಿಯ ಬಗ್ಗೆ ಬರೆದ 'ಕಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ' ಗೂ ಹೆಚ್ಚು ಪ್ರಸಿದ್ಧಿಯಾಗಿದೆ.

ಯವರು ಭಾರತದ ಗ್ರಾಮೀಣ ಸಂಸ್ಕೃತಿಯ ಬಗೆಗಿನ ಅಧ್ಯಯನವು ಹೆಚ್ಚು ಮಹತ್ವನ್ನು ದೆ. ಇವರು ಭಾರತೀಯ ದೇವತೆಗಳು ಜನರನ್ನು ಒಗ್ಗೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ

ಯವರು ಭಾರತೀಯ ಕಲೆ ಮತ್ತು ವಾಸ್ತುಶಿಲ್ಪದ ಅಧ್ಯಯನದಲ್ಲಿ ಹಿಂದು, ಜೈನ ಮತ್ತು ಬೌದ್ಧ ುತ್ತು ಸ್ಮಾರಕಗಳಿಗೂ ಸಾಮ್ಯತೆಯಿದೆ, ಎಂದು ತಮ್ಮ ಸಂಶೋಧನೆಯ ಮೂಲಕ ).

ಜಿ. ಎಸ್. ಘುರ್ರೆಯವರು "ಕ್ಯಾಸ್ಟ್ ಅಂಡ್ ರೇಸ್ ಇನ್ ಇಂಡಿಯಾ", "ದಿ ಸೊಷಿಯಲ್ ಪ್ರೊಸಸ್", "ಕಲ್ಚರ್ ಅಂಡ್ ಸೊಸೈಟಿ", "ಷೆಡ್ಯೂಲ್ಡ್ ಟ್ರೈಬ್", "ವೇದಿಕ್ ಇಂಡಿಯಾ", "ಭಾರತೀಯ ಸಾಧುಗಳು", ಹೀಗೆ ಹಲವು ಕೃತಿಗಳನ್ನು ರಚಿಸುವುದರ ಮೂಲಕ ಸಮಾಜಶಾಸ್ತ್ರಕ್ಕೆ ತಮ್ಮ ಕೊಡುಗೆಯನ್ನು ನೀಡಿದ್ದಾರೆ. 1984 ರಲ್ಲಿ ಘುರ್ರೆಯವರು ನಿಧನ ಹೊಂದಿದರು.

## 10.2 ಎಮ್. ಎನ್. ಶ್ರೀನಿವಾಸ್ (1961-1999)



ಎಮ್. ಎನ್. ಶ್ರೀನಿವಾಸ್‌ರವರು ಭಾರತೀಯ ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು. ನವೆಂಬರ್ 16, 1916 ರಂದು ಕರ್ನಾಟಕದ ಮೈಸೂರು ಜಿಲ್ಲೆಯಲ್ಲಿ ಜನಿಸಿದರು. ತಂದೆ ಎಂ. ಎ. ನರಸಿಂಹಚಾರ್ ತಾಯಿ ರುಕ್ಮಿಣಿ. ಇವರು ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಎಂ. ಎ. ಎಲ್. ಎಲ್. ಬಿ. ಮತ್ತು ಪಿ. ಎಚ್. ಡಿ. ಪದವಿಯನ್ನು ಪಡೆದರು. ನಂತರ ಇಂಗ್ಲೆಂಡಿನ ಆಕ್ಸ್ ಪರ್ಡ್ ವಿಶ್ವವಿದ್ಯಾಲಯದಲ್ಲಿ ವ್ಯಾಸಂಗ ಮಾಡಿದರು. ಎಮ್. ಎನ್. ಶ್ರೀನಿವಾಸ್‌ರವರು ಕ್ಷೇತ್ರಕಾರ್ಯ ಅಧ್ಯಯನದಿಂದ ಹೆಚ್ಚು ಜನಪ್ರಿಯವಾಗಿದ್ದಾರೆ.

ಎಮ್. ಎನ್. ಶ್ರೀನಿವಾಸ್‌ರವರು ದೆಹಲಿಯ ಸ್ಕೂಲ್ ಆಫ್ ಎಕನಾಮಿಕ್ಸ್ ನಲ್ಲಿ ಸಮಾಜಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಬೆಂಗಳೂರಿನಲ್ಲಿರುವ ಭಾರತೀಯ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆ (ISEC) ಸಂಸ್ಥೆಯ ಸ್ಥಾಪನೆ ಮಾಡುವಲ್ಲಿ ಪಾತ್ರ ವಹಿಸಿದರು. ಭಾರತೀಯ ಸಮಾಜದ ಸಾಮಾಜಿಕ ಬದಲಾವಣೆ ಕುರಿತಂತೆ ಎಂ. ಎನ್. ಶ್ರೀನಿವಾಸ್‌ರವರು ಸಂಸ್ಕೃತಾನುಕರಣ, ಪಾಶ್ಚಾತ್ಯಾನುಕರಣ ಮತ್ತು ಪ್ರಬಲಜಾತಿ ಎಂಬ ಪರಿಕಲ್ಪನೆಯನ್ನು ಪರಿಚಯಿಸಿದ್ದಾರೆ.

"ರಿಲಿಜನ್ ಅಂಡ್ ಸೊಸೈಟಿ ಅಮಾಂಗ್ ದಿ ಕೂರ್ಗ್ಸ್ ಆಫ್ ಸೌತ್ ಇಂಡಿಯಾ" (ದಕ್ಷಿಣ ಭಾರತದ ಕೊಡವರ ಧರ್ಮ ಮತ್ತು ಸಮಾಜ) ಇವರ ಪ್ರಸಿದ್ಧ ಕೃತಿ. ಈ ಕೃತಿಯಲ್ಲಿ ಕೊಡವರ ಧಾರ್ಮಿಕ ನಂಬಿಕೆಗಳು, ಸಾಂಸ್ಕೃತಿಕ ಪದ್ಧತಿಗಳ ಕುರಿತು ಸಂಶೋಧನೆ ಮಾಡಿದ್ದಾರೆ.

ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮನ್ನಣೆಗಳಿಸಿದ್ದ ಎಂ. ಎನ್. ಶ್ರೀನಿವಾಸರವರು 1) ಪದ್ಮಭೂಷಣ ಪ್ರಶಸ್ತಿ. 2) ರಿಸರ್ವ್ ಮೆಮೋರಿಯಲ್ ಪದಕ, 3) ಶರತ್‌ಚಂದ್ರ ರಾಯ್ ಮೆಮೋರಿಯಲ್ ಪದಕ. 4) ಡಾ. ಹೋಮಿಬಾಬಾ ಸೀನಿಯರ್

ಫೆಲೋಶಿಪ್. 5) ಜಿ ಎಸ್ ಘುರ್ರೆ ಅವಾರ್ಡ್. 6) ಅಮೇರಿಕಾದ ನ್ಯೆಸ್ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ. ಹೀಗೆ ಹಲವಾರು ಪ್ರಶಸ್ತಿಗಳನ್ನು ಗಳಿಸಿದ್ದಾರೆ.

ಎಂ. ಎನ್. ಶ್ರೀನಿವಾಸ್‌ರವರ ಕೃತಿಗಳು 1. "ಮ್ಯಾರೇಜ್ ಅಂಡ್ ಪ್ಯಾಮಿಲಿ ಇನ್ ಇಂಡಿಯಾ". 2. "ರಿಲಿಜನ್ ಅಂಡ್ ಸೊಸೈಟಿ ಅಮಾಂಗ್ ದಿ ಕೂರ್ಗ್ಸ್ ಆಫ್ ಸೌತ್ ಇಂಡಿಯಾ." 3. "ಇಂಡಿಯಾಸ್ ವಿಲೇಜ್." 4. "ಕ್ಯಾಸ್ಟ್ ಇನ್ ಮಾಡ್ರನ್ ಇಂಡಿಯಾ ಅಂಡ್ ಅದರ್ ಎಸ್ಸೇಸ್." 5. "ಸೋಷಿಯಲ್ ಛೇಂಜ್ ಇನ್ ಮಾಡ್ರನ್ ಇಂಡಿಯಾ." 6. "ಸೋಷಿಯಲಾಜಿಕಲ್ ಬುಲಟಿನ್." 7. "ರಿಮೆಂಬರ್ಡ್ ವಿಲೇಜ್."

### *ಸಮಾಜಶಾಸ್ತ್ರಕ್ಕೆ ಎಂ. ಎನ್. ಶ್ರೀನಿವಾಸ್‌ರವರ ಕೊಡುಗೆಗಳು:*

1. ಡಾ. ಎಂ. ಎನ್. ಶ್ರೀನಿವಾಸರವರು ಐ. ಸಿ. ಎಸ್. ಎಸ್. ಆರ್. (ಇಂಡಿಯನ್ ಕೌನ್ಸಿಲ್ ಆಫ್ ಸೋಷಿಯಲ್ ಸೈನ್ಸ್ ರೀಸರ್ಚ್) ನ ನ್ಯಾಷಿನಲ್ ಫೆಲೋ ಆಗಿ ಕಾರ್ಯ ನಿರ್ವಹಿಸಿದ್ದಾರೆ.
2. ಬೆಂಗಳೂರಿನ ಭಾರತೀಯ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆ (ISEC) ಸಂಸ್ಥೆಯನ್ನು ಡಾ. ವಿ. ಕೆ. ಆರ್. ವಿ. ರಾವ್ ರವರ ಜೊತೆಗೂಡಿ ಸ್ಥಾಪಿಸಿದ್ದಾರೆ.
3. ಬೆಂಗಳೂರಿನ ಭಾರತೀಯ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆ (ISEC) ಸಂಸ್ಥೆಯ ಜಂಟಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದಾರೆ.
4. ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯದ ಸೈಮನ್ ಸೀನಿಯರ್ ಫೆಲೋ ಸಂಶೋಧಕರಾಗಿ ಕಾರ್ಯ ನಿರ್ವಹಿಸಿದ್ದಾರೆ.
5. ನ್ಯೂ ಇಂಗ್ಲೆಂಡ್ ವಿಶ್ವವಿದ್ಯಾಲಯದ ಸಂದರ್ಶಕ ಅತಿಥಿಯಾಗಿ ಕಾರ್ಯ ನಿರ್ವಹಿಸಿದ್ದಾರೆ.

ಹೀಗೆ ಎಂ. ಎನ್. ಶ್ರೀನಿವಾಸರವರು ಸಮಾಜಶಾಸ್ತ್ರ ಬೋಧಕರಾಗಿ, ಸಂಶೋದಕರಾಗಿ, ಮಾರ್ಗದರ್ಶಕರಾಗಿ ಸೇವೆ ಸಲ್ಲಿಸಿದ್ದಾರೆ. ಇವರು ನವೆಂಬರ್ 30, 1999 ರಂದು ದಿವಂಗತರಾದರು.

## 10.3 ಶ್ರೀಮತಿ ಇರಾವತಿ ಕರ್ವೆ



ಡಾ. ಇರಾವತಿ ಕರ್ವೆಯವರು ಭಾರತೀಯ ಸಮಾಜಶಾಸ್ತ್ರಜ್ಞೆ. ಮತ್ತು ಮಾನವಶಾಸ್ತ್ರಜ್ಞೆ. ಜಿ. ಎಸ್. ಘುರ್ರೆಯವರ ವಿದ್ಯಾರ್ಥಿಯಾಗಿದ್ದರು. ಇವರ ತಂದೆ ತಾಯಿಗಳು ಬರ್ಮದಲ್ಲಿ ನೆಲೆಸಿದ್ದಾಗ ಜನಿಸಿದ್ದರಿಂದ ಇವರಿಗೆ ಬರ್ಮದ ಜೀವ ನದಿಯಾದ ಇರಾವತಿ ಎಂಬ ಹೆಸರನ್ನು ನಾಮಕರಣ ಮಾಡಲಾಗಿದೆ.

ಭಾರತದ ಪ್ರಪ್ರಥಮ ಮಹಿಳಾ ಸಮಾಜಶಾಸ್ತ್ರಜ್ಞೆ. ಸಾಮಾಜಿಕ ಸಂಸ್ಥೆಗಳು ಮತ್ತು ಸಮಸ್ಯೆಗಳನ್ನು ಮಾನವಶಾಸ್ತ್ರ, ಮನಃಶಾಸ್ತ್ರ ಮತ್ತು ಸಮಾಜಶಾಸ್ತ್ರೀಯ ದೃಷ್ಟಿಕೋನದಿಂದ ಅರ್ಥೈಸಿದ್ದಾರೆ.

ಕರ್ವೆಯವರು ಬೊಂಬಾಯಿ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರ ಎಂ. ಎ. ಪದವಿಯನ್ನು ಪಡೆದರು. ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಮಾನವಶಾಸ್ತ್ರ ವಿಷಯದಲ್ಲಿ ಪಿ. ಎಚ್. ಡಿ. ಪದವಿಯನ್ನು ಗಳಿಸಿದ್ದಾರೆ. ಪುನಾದ ಡೆಕ್ಕನ್ ಕಾಲೇಜು, ಪೋಸ್ಟ್ ಗ್ರಾಜುಯೇಟ್ ಅಂಡ್ ರೀಸರ್ಚ್ ಇನ್‌ಸ್ಟಿಟ್ಯೂಟ್ ಎಂಬ ಸ್ನಾತಕೊತ್ತರ ಶಿಕ್ಷಣ ಕೇಂದ್ರದಲ್ಲಿ ಪ್ರಾಧ್ಯಾಪಕಿಯಾಗಿ ಸೇವೆ ಸಲ್ಲಿಸಿದ್ದರು.

ಇರಾವತಿ ಕರ್ವೆಯವರ ಅಧಯನ ಕ್ಷೇತ್ರವು ವಿಶಾಲವಾದುದು. ಇರಾವತಿ ಕರ್ವೆಯವರು ವಿಶೇಷವಾಗಿ ಅಧಯನ ಮಾಡಿದ ಸಮಾಜಶಾಸ್ತ್ರೀಯ ವಿಷಯಗಳೆಂದರೆ ಭಾರತೀಯ ಸಮಾಜ, ಭಾರತದ ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ಮತ್ತು ಬಂಧುತ್ವ.

ಡಾ. ಇರಾವತಿ ಕರ್ವೆಯವರು 1) ಕಿನ್‌ಶಿಪ್ ಆರ್ಗನೈಸೇಶನ್ ಇನ್ ಇಂಡಿಯಾ 2) ಯುಗಾಂತ, (ಈ ಕೃತಿಗೆ ಪ್ರಾದೇಶಿಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ದೊರೆತಿದೆ). 3) ಫ್ಯಾಮಿಲಿ ಇನ್ ಇಂಡಿಯಾ, 4) ಲ್ಯಾಂಡ್ ಅಂಡ್ ಪೀಪಲ್ ಆಫ್ ಮಹಾರಾಷ್ಟ್ರ, 5) ಪರಿಪೂರ್ತಿ 6) ಅಮ್‌ಚಿ ಸಂಸ್ಕೃತಿ 7) ಸರ್ಸ್ಕೃತಿ ಮಾನ್ ಜೆಕಾಯಿ ಹೀಗೆ ಮರಾಠಿ ಸಾಹಿತ್ಯದಲ್ಲಿ ಅನೇಕ ಕೃತಿಗಳನ್ನು ರಚಿಸಿದ್ದಾರೆ.

## 10.4 ಸಿ. ಪಾರ್ವತಮ್ಮ

ಸಿ. ಪಾರ್ವತಮ್ಮರವರು ಭಾರತೀಯ ಸಮಾಜಶಾಸ್ತ್ರಜ್ಞನರು. 1928 ರಲ್ಲಿ ಕರ್ನಾಟಕದ ದಾವಣಗೆರೆಯ ಶ್ಯಾಗಲೆ ಎಂಬಲ್ಲಿ ಜನಿಸಿದರು. ತಂದೆ ತಾಯಿ ಕಡುಬಡವರು. ಜನಿಸಿದ 9 ತಿಂಗಳಲ್ಲಿ ತನ್ನ ತಂದೆಯನ್ನು ಕಳೆದುಕೊಂಡರು. ತಾಯಿಯ ಸಹಾಯದಿಂದ ಹುಟ್ಟೂರಿನಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದರು. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಸಾಮಾಜಿಕ ತತ್ವಜ್ಞಾನ ವಿಷಯದಲ್ಲಿ ಬಿ. ಎ. ಹಾನರ್ಸ್ ಪದವಿಯನ್ನು ಮುಗಿಸಿದರು. ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂ. ಎ. ಪದವಿಯನ್ನು ಗಳಿಸಿದರು. ಅಧ್ಯಯನದ ಅವಧಿಯಲ್ಲಿ "ದಿ ಬಾಬಾ ಮೆಮೊರಿಯಲ್ ಗೋಲ್ಡ್ ಮೆಡಲ್", ಪ್ರೊಫೆಸರ್ ಹಿರಿಯಣ್ಣ ಗೋಲ್ಡ್ ಮೆಡಲ್ ಪದಕವನ್ನು ಪಡೆದಿದ್ದಾರೆ. ನಂತರ ಮೈಸೂರಿನಲ್ಲಿಯೇ ಐದು ವರ್ಷಗಳ ಕಾಲ ಅಧ್ಯಾಪನ ವೃತ್ತಿಯನ್ನು ಮುಂದುವರೆಸಿದರು. ನಂತರ ಮುಂದಿನ ಉನ್ನತ ಶಿಕ್ಷಣಕ್ಕಾಗಿ ಪ್ರತಿಷ್ಟಿತ ವಿಶ್ವವಿದ್ಯಾಲಯವಾದ ಹಾರ್ವರ್ಡ್ ವಿಶ್ವವಿದ್ಯಾಲಯಕ್ಕೆ ಸೇರಿದರು. ಆದರೆ ಅಲ್ಲಿನ ಶಿಕ್ಷಣ ಅವರಿಗೆ ತೃಪ್ತಿ ನೀಡದ ಕಾರಣ ಶಿಕ್ಷಣವನ್ನು ಅರ್ಧಕ್ಕೆ ಮಟುಕುಗೊಳಿಸಿ ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದರು. ಇಂಗ್ಲೆಂಡಿನ ಮ್ಯಾಂಚೆಸ್ಟರ್ ನಲ್ಲಿರುವ ವಿಕ್ಟೋರಿಯಾ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದರು.

ಇಂಗ್ಲೆಂಡಿನಿಂದ ಭಾರತಕ್ಕೆ ಆಗಮಿಸಿದ ಇವರು ಮೈಸೂರಿನ ಮಹಾರಾಣಿ ಮತ್ತು ಮಹಾರಾಜ ಕಾಲೇಜಿನಲ್ಲಿ ಸೇವೆ ಸಲ್ಲಿಸಿದರು. ಮೈಸೂರು ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ವಿಬಾಗದಲ್ಲಿ ರೀಡರ್ ರಾಗಿ, ಪ್ರೋಪೆಸರ್ ಆಗಿ, ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದರು. ಭಾಷೆ, ವಿಷಯ ನಿರೂಪಣಾ ಶೈಲಿ, ಪ್ರೌಢಚಿಂತನೆಗೆ ಹೆಸರುವಾಸಿಯಾಗಿದ್ದು ಎಲ್ಲರ ಮೆಚ್ಚಿನ ಪ್ರಾಧ್ಯಾಪಕಿಯಾಗಿದ್ದರು.

ಡಾ. ಪಾರ್ವತಮ್ಮನವರು ಅಧ್ಯಯನ ಮಾಡಿದ ಸಮಾಜಶಾಸ್ತ್ರೀಯ ಕ್ಷೇತ್ರಗಳೆಂದರೆ ವೀರಶೈವ ಮತ, ಭಾರತದ ಸಾಮಾಜಿಕ ಸಂರಚನೆ, ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳು, ಗ್ರಾಮ ಸಮುದಾಯ, ವೈದಕೀಯ ಸಮಾಜಶಾಸ್ತ್ರ ಇತ್ಯಾದಿ.

ಡಾ. ಪಾರ್ವತಮ್ಮನವರು ಇಂಡಿಯನ್ ಸೋಸಿಯಲಾಜಿಕಲ್ ಸೊಸೈಟಿ, ಸೊಸೈಟಿ ಫಾರ್ ಸೌತ್ ಇಂಡಿಯನ್ ಸ್ಟಡೀಸ್ (ಯು. ಎಸ್. ಎ) ಯ ಆಜೀವ ಸದಸ್ಯೆಯಾಗಿ, ಅಸೋಶಿಯೇಷನ್ ಆಫ್ ಸೋಶಿಯಲ್ ಅಂಥ್ರೋಪಾಲಿಸ್ಟ್ಸ್ ಇಂಗ್ಲೆಂಡ್, ರಿಸರ್ವ ಬ್ಯಾಂಕ್ ಆಫ್ ಇಂಡಿಯಾ ಲೋಕಲ್ ಬೋರ್ಡ್, ಜವಹಾರ್ ಲಾಲ್ ನೆಹರೂ ಯೂನಿವರ್ಸಿಟಿ, ಆಲ್ ಇಂಡಿಯಾ ರೇಡಿಯೋ ಪ್ರೋಗ್ರಾಮ್ ಬೋರ್ಡ್ ಬೆಂಗಳೂರು, ಆಂಥ್ರೋಪಾಲಾಜಿಕಲ್ ಸರ್ವೆ ಆಫ್ ಇಂಡಿಯಾ ಇವುಗಳಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿದರು.

ಡಾ. ಪಾರ್ವತಮ್ಮನವರಿಗೆ ಕರ್ನಾಟಕ ಸರ್ಕಾರದಿಂದ ರಾಜ್ಯೋತ್ಸವ ಪ್ರಶಸ್ತಿ-1990, ಕರ್ನಾಟಕ ಸರ್ಕಾರದಿಂದ ಡಾ. ಬಿ. ಆರ್. ಅಂಬೇಡ್ಕರ್ ಪ್ರಶಸ್ತಿ-1992, ಎನ್. ಎಂ. ಕೆ. ಆರ್. ವಿ. ಮಹಿಳಾ ಕಾಲೇಜು ಗಾರ್ಗಿ ಪ್ರಶಸ್ತಿ-1999, ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ನಾಡೋಜ ಪ್ರಶಸ್ತಿ- 2005 ಇವರಿಗೆ ಬಂದ ಪ್ರಶಸ್ತಿಗಳು.

ಪಾರ್ವತಮ್ಮನವರು ಬರೆದ ಕೃತಿಗಳು 1) ರಾಜಕೀಯ ಮತ್ತು ಧರ್ಮ. 2) ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ಪಂಗಡಗಳು. 3) ಬುಡಕಟ್ಟು ಸಮುದಾಯ ಅಭಿವೃದ್ಧಿ. 4) ವಿಶ್ವ ವಿದ್ಯಾಲಯ ಪದವೀದರರ ಉದ್ಯೋಗ ಸಮಸ್ಯೆಗಳು. ಮತ್ತು ಮೊದಲಾದ ಬರಹಗಳು.

## 10.5 ಪ್ರೊ. ಜೋಗನ್ ಶಂಕರ್



ಭಾರತದ ಖ್ಯಾತ ಸಮಾಜಶಾಸ್ತ್ರಜ್ಞರಲ್ಲಿ ಕರ್ನಾಟಕದ ಪ್ರೊ. ಜೋಗನ್ ಶಂಕರ್ ಕೂಡ ಒಬ್ಬರಾಗಿದ್ದಾರೆ. 1954 ಮೇ 5 ರಂದು ಕಲಬುರಗಿ ಜಿಲ್ಲೆಯ ಅಳಂದ ತಾಲೂಕು ಅಡಲಗಿ ಗ್ರಾಮದಲ್ಲಿ ಜನಿಸಿದ ಜೋಗನ್ ಶಂಕರ್ ರವರು ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ. ಎ. ಪದವಿಯನ್ನು ಪಡೆದರು. ಅವರು ಡಾಕ್ಟರೇಟ್ ಪದವಿಗಾಗಿ ಮಂಡಿಸಿದ ದೇವದಾಸಿಯರನ್ನು ಕುರಿತ ಅಧ್ಯಯನವು ಅವರಿಗೆ ವಿಶೇಷ ಪ್ರಸಿದ್ಧಿಯನ್ನು ತಂದುಕೊಟ್ಟಿತ್ತು. ಮೈಸೂರು ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರ ವಿಭಾಗದಲ್ಲಿ ಸೇವೆ ಸಲ್ಲಿಸಿದ ಅವರು ಕರ್ನಾಟಕದ ಬೇರೆ ಬೇರೆ ವಿಶ್ವ ವಿದ್ಯಾಲಯಗಳಲ್ಲಿ ಸಮಾಜಶಾಸ್ತ್ರದ ಅಧ್ಯಾಪಕರಾಗಿ ಕಾರ್ಯನಿರ್ವಹಿಸಿದ್ದಾರೆ. ಮಂಗಳೂರು ವಿಶ್ವವಿದ್ಯಾಲಯದ ಸಮಾಜಶಾಸ್ತ್ರ ಮತ್ತು ಸಮಾಜಕಾರ್ಯ ವಿಭಾಗವನ್ನು ಕಟ್ಟಿರೂಪಿಸಿದ ಕೀರ್ತಿಯು ಇವರಿಗೆ ಸಲ್ಲುತ್ತದೆ.

ಉತ್ತಮ ಆಡಳಿತಗಾರರು ಮತ್ತು ಸಂಶೋಧಕರು ಆದ ಜೋಗನ್ ಶಂಕರ್ ರವರು ಕೃಷ್ಣ ಮೇಲ್ದಂಡೆ ಯೋಜನೆಯ ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸುವ ಕಾರ್ಯದಲ್ಲಿ ಮಹತ್ತರ ಪಾತ್ರ ವಹಿಸಿದರು. ಆ ಯೋಜನೆಯಲ್ಲಿ ಮುಳುಗಡೆಯಾದ ನೂರಾರು ಹಳ್ಳಿಯ ಜನರ ಬದುಕು ಮತ್ತು ಸಂಸ್ಕೃತಿಯನ್ನು ಪ್ರತಿನಿಧಿಸುವ ಸಲುವಾಗಿ ಮ್ಯೂಸಿಯಂ ಒಂದನ್ನು

ರೂಪಿಸಿದರು. ಅವರ ಈ ಕೆಲಸವು ಬಾಗಲುಕೋಟೆಯ ಸುತ್ತಮುತ್ತಲಿನ ಪ್ರದೇಶದ ಜನರಲ್ಲಿ ಜನಪ್ರಿಯತೆಯನ್ನು ಗಳಿಸಿತು.

ಪ್ರೊ. ಜೋಗನ್ ಶಂಕರ್ ರವರ ಪ್ರತಿಭೆಯನ್ನು ಗುರುತಿಸಿದ ಬೆಂಗಳೂರು ವಿಶ್ವ ವಿಧ್ಯಾಲಯವು ಅವರನ್ನು ಡಾ. ಬಿ. ಆರ್. ಬಾಬಾ ಸಾಹೇಬ್ ಅಂಬೇಡ್ಕರ್ ಅಧ್ಯಯನ ಮತ್ತು ಸಂಶೋಧನ ಕೇಂದ್ರದ ನಿರ್ದೇಕರಾಗಿ ಕೆಲಸ ಮಾಡಲು ಆಹ್ವಾನಿಸಲಾಯಿತು. ಸಂಶೋಧನಾ ಮತ್ತು ಅಧ್ಯಯನ ಕೇಂದ್ರದ ನಿರ್ದೇಕರಾಗಿ ಬಾಬಾ ಸಾಹೇಬರ ಕುರಿತ ಮ್ಯೂಜಿಯಂ ಒಂದನ್ನು ರೂಪಿಸಿದರು. ಜೊತೆಗೆ ಹಿಂದುಳಿದ ಮತ್ತು ಗ್ರಾಮೀಣ ವಿದ್ಯಾರ್ಥಿಗಳಿಗಾಗಿ ಪ್ರತ್ಯೇಕ ಗ್ರಂಥಾಲಯ ಮತ್ತು ಕಂಪ್ಯೂಟರ್ ಕಲಿಕಾ ಕೇಂಧ್ರಗಳನ್ನು ಸ್ಥಾಪಿಸಿದರು. ಅಧ್ಯಾಪಕರಾದ ಜೋಗನ್ ಶಂಕರ್ ರವರು 45 ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪಿ. ಹೆಚ್. ಡಿ. ಸಂಶೋಧನಾ ಮಾರ್ಗದರ್ಶನ ಮಾಡಿದ್ದಾರೆ.

ಇವರ ಸೇವೆಯನ್ನು ಗುರುತಿಸಿ ಕರ್ನಾಟಕ ಸರ್ಕಾರವು ಕ್ರಮವಾಗಿ 1992 ಮತ್ತು 2002 ನೇ ಇಸವಿಯಲ್ಲಿ ಅಂಬೇಡ್ಕರ್ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ. ಪ್ರಸ್ತುತ ಉಪಕುಲಪತಿಯಾಗಿ ಕುವೆಂಪು ವಿಶ್ವವಿದ್ಯಾಲಯದಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ.

ಅವರ ಪ್ರಸಿದ್ಧ ಕೃತಿಗಳೆಂದರೆ ದೇವದಾಸಿ ಕಲ್ಟ್- ಎ ಸೊಷಿಯಾಲಜಿಕಲ್ ಅನಲೀಸಿಸ್ ಮತ್ತು ಸೋಷಿಯಲ್ ಪ್ರಾಂಬ್ಲಮ್ಸ್ ಇನ್ ಇಂಡಿಯಾ. ರೂರಲ್ ಸೊಶಿಯಾಲಜಿ.

## ಸಾರಾಂಶ

1. ಜಿ. ಎಸ್. ಘುರ್ರೆಯವರು ಮಹಾರಾಷ್ಟ್ರದ ಮಾಲ್ವಾನ್‌ನ ರತ್ನಗಿರಿಯಲ್ಲಿ 12 ಡಿಸೆಂಬರ್ 1893 ರಲ್ಲಿ ಜನಿಸಿದರು.
2. ಜಿ. ಎಸ್. ಘುರ್ರೆಯವರನ್ನು ಭಾರತೀಯ ಸಮಾಜಶಾಸ್ತ್ರದ ಪಿತಾಮಹ ಎಂದು ಕರೆಯುತ್ತಾರೆ.
3. ಎಮ್. ಎನ್. ಶ್ರೀನಿವಾಸರವರು ಬೆಂಗಳೂರಿನಲ್ಲಿರುವ ಭಾರತೀಯ ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆ (ISEC) ಸಂಸ್ಥೆಯ ಸ್ಥಾಪನೆಗೆ ಕಾರಣಕರ್ತರಾಗಿದ್ದಾರೆ.
4. ಡಾ. ಪಾರ್ವತಮ್ಮನವರು ಇಂಗ್ಲೆಂಡಿನ ಮ್ಯಾಂಚೆಸ್ಟರ್‌ನಲ್ಲಿರುವ ವಿಕ್ಟೋರಿಯಾ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದಿದ್ದಾರೆ.
5. ಪ್ರೊ. ಜೋಗನ್ ಶಂಕರ್ ರವರು 1954 ಮೇ 5 ರಂದು ಕಲಬುರಗಿ ಜಿಲ್ಲೆಯ ಅಳಂದ ತಾಲೂಕು ಅಡಲಗಿ ಗ್ರಾಮದಲ್ಲಿ ಜನಿಸಿದರು

6. ಪ್ರೊ. ಜೋಗನ್ ಶಂಕರ್ ರವರು ದೇವದಾಸಿ ಕಲ್ಟ್- ಎ ಸೊಷಿಯಾಲಜಿಕಲ್ ಅನಲೀಷಿಷ್ ಮತ್ತು ಸೋಷಿಯಲ್ ಪ್ರಾಂಬ್ಲಮ್ಸ್ ಇನ್ ಇಂಡಿಯಾ, ರೂರಲ್ ಸೊಶಿಯಾಲಜಿ. ಎಂಬ ಕೃತಿಗಳನ್ನು ರಚಿಸಿದ್ದಾರೆ.

## ಅಭ್ಯಾಸ

### I. ಖಾಲಿ ಬಿಟ್ಟ ಸ್ಥಳಗಳನ್ನು ತುಂಬಿರಿ:

1. ಜಿ. ಎಸ್. ಘುರ್ರೆಯವರು _______ರಂದು ಜನಿಸಿದರು.
2. ಎಮ್. ಎನ್.ಶ್ರೀನಿವಾಸರವರು ಕರ್ನಾಟಕದ _______ಜಿಲ್ಲೆಯಲ್ಲಿ ಜನಿಸಿದರು.
3. ಭಾರತದ ಪ್ರಪ್ರಥಮ ಮಹಿಳಾ ಸಮಾಜಶಾಸ್ತ್ರಜ್ಞೆ _______.
4. ರಾಜಕೀಯ ಮತ್ತು ಧರ್ಮ ಕೃತಿ ಎಂಬ ಬರೆದವರು _______.

### II. ಒಂದು ವಾಕ್ಯದಲ್ಲಿ ಉತ್ತರಿಸಿ:

1. ಭಾರತೀಯ ಸಮಾಜಶಾಸ್ತ್ರದ ಪಿತಾಮಹ ಯಾರು?
2. ಎಮ್. ಎನ್.ಶ್ರೀನಿವಾಸರವರು ಯಾವುದಾದರೂ ಒಂದು ಕೃತಿ ತಿಳಿಸಿ.
3. ಡಾ. ಪಾರ್ವತಮ್ಮನವರು ಬರೆದ ಕೃತಿಗಳು ಯಾವುವು?
4. ಪ್ರೊ. ಜೋಗನ್ ಶಂಕರವರು ಯಾವಾಗ ಜನಿಸಿದರು?

### III. ಎರಡು ಮೂರು ವಾಕ್ಯದಲ್ಲಿ ಉತ್ತರಿಸಿ:

1. ಜಿ. ಎಸ್. ಘುರ್ರೆಯವರ ಯಾವುದಾದರು ಎರಡು ಕೃತಿಗಳನ್ನು ಹೆಸರಿಸಿ.
2. ಎಮ್. ಎನ್.ಶ್ರೀನಿವಾಸರವರು ಪರಿಚಯಿಸಿದ ಹೊಸ ಅಧ್ಯಯನ ಕ್ಷೇತ್ರಗಳು ಯಾವುವು?
3. ಡಾ. ಪಾರ್ವತಮ್ಮನವರು ಅಧ್ಯಯನ ಮಾಡಿದ ಸಮಾಜಶಾಸ್ತ್ರೀಯ ಕ್ಷೇತ್ರಗಳು ಯಾವುವು?

**IV. ಎಂಟು ವಾಕ್ಯಗಳಲ್ಲಿ ಉತ್ತರಿಸಿ:**

1. ಜಿ. ಎಸ್. ಘುರ್ರೆಯವರ ಕೊಡುಗೆಗಳನ್ನು ವಿಶ್ಲೇಷಿಸಿ.
2. ಸಮಾಜಶಾಸ್ತ್ರಕ್ಕೆ ಎಮ್. ಎನ್. ಶ್ರೀನಿವಾಸ್ ರವರ ಕೊಡುಗೆಗಳನ್ನು ತಿಳಿಸಿ.
3. ಶ್ರೀಮತಿ ಇರಾವತಿ ಕರ್ವೆ ಯಾರು? ಸಮಾಜಶಾಸ್ತ್ರಕ್ಕೆ ಅವರ ಕೊಡುಗೆಗಳೇನು?
4. ಪ್ರೊ. ಜೋಗನ್ ಶಂಕರ್ ರವರ ಬಗ್ಗೆ ಟಿಪ್ಪಣಿ ಬರೆಯಿರಿ.

**ಸಲಹಾತ್ಮಕ ಚಟುವಟಿಕೆಗಳು:**

1. ಭಾರತೀಯ ಸಮಾಜಶಾಸ್ತ್ರಜ್ಞರ ಹೆಸರುಗಳನ್ನು ಪಟ್ಟಿ ಮಾಡಿ.
2. ಸಮಾಜಶಾಸ್ತ್ರಜ್ಞರ ಕುರಿತು ಎಲ್ಲಾ ವಿಧ್ಯಾರ್ಥಿಗಳು ಸೇರಿ ಗುಂಪು ಚರ್ಚೆ ನಡೆಸಿ.
3. ಭಾರತೀಯ ಸಮಾಜಶಾಸ್ತ್ರಜ್ಞರ ಭಾವಚಿತ್ರಗಳನ್ನು ಸಂಗ್ರಹಿಸಿ ಆಲ್ಬಂ ತಯಾರಿಸಿ.